# ಕೊರವಂಜಿ

Koravanji

ಮೇ

೧೯೫೪



ಸಂಪಾದಕರು :

ಶ್ರೀ॥ ರಾ. ಶಿ.

ಬರಹಗಾರರು :

ಶ್ರೀ॥ ಪಾಟೀಲಿ

ಶ್ರೀ॥ ರಾಮಕೃಷ್ಣ

ಶ್ರೀ॥ ನ. ಸು.

ಶ್ರೀಮತಿ ಸರೋಜಿನಿ

ಶ್ರೀ॥ "ಕೇಫ"

ಶ್ರೀ॥ ದಾಶರಥಿ ದೀಕ್ಷಿತ್

ಇತ್ಯಾದಿ, ಇತ್ಯಾದಿ.

ಬಿಡಿ ಪ್ರತಿ
ಕೇವಲ ನಾಲ್ಕಾಣೆ

ತಿಳಿನಗೆಯ ಮಾಸಪತ್ರಿಕೆ

ಶೀಘ್ರದಲ್ಲಿಯೇ ಪ್ರದರ್ಶನವನ್ನು ನಿರೀಕ್ಷಿಸಿ

ಎ. ವಿ. ಯಂ. ರವರ

# ಪೆಣ್

(ತಮಿಳು)



ಅಂಜಲಿದೇವಿ—ವೈಜಯಂತಿಮಾಲ, ನಾಗಯ್ಯ,
ಬಾಲಚಂದರ್—ಆರ್. ಗಣೇಶ್—ಟಿ. ಎಸ್. ಬಾಲಯ್ಯ,
ಕೆ. ಆರ್. ರಾಮಸ್ವಾಮಿ ಅಭಿನಯ

ನಿರ್ದೇಶನ
ಎಂ. ವಿ. ರಾಮನ್



ಸ್ಟುಡಿಯೋ
ಎ. ವಿ. ಯಂ.

A TALLAM RELEASE






















# ಶಾಲಿಮಾರ್ ಸೂಪರ್‌ಲ್ಯಾಕ್

**ಸಿಂಥೆಟಿಕ್ ಎನಾಮೆಲ್**

**SHALIMAR PAINT, COLOUR & VARNISH CO., LTD.,**

Post Box 136, Madras 1




ಸಂಪುಟ ೧೩ ಮೇ ೧೯೫೪ ಸಂಚಿಕೆ ೨

## ಕುಹಕಿಡಿಗಳು

ಭಿನ್ನಾಭಿಪ್ರಾಯದ ಮಥನದಿಂದಲೇ ಪ್ರಗತಿಸಾಧ್ಯ! (ಹೇಳಿಕೆ)

—ಮಥನದಿಂದ ಬಂದ ಹಾಲಾಹಲವನ್ನು ನುಂಗುವವರು ಪ್ರಜೆಗಳೇ!

* * *

ಮಂತ್ರಿಗಳು ಸರ್ಕಾರದ ಸೇವಕರಲ್ಲ (ಚುನಾವಣೆ ಸಮಿತಿಯ ತೀರ್ಪು)

—ಅಂದಮೇಲೆ ಸರ್ಕಾರದ ರೀತಿ, ನಿಯಮಗಳಂತೆ ನಡೆಯಬೇಕಾಗಿಲ್ಲ!!

* * *

ಸರ್ಕಾರಿ ನೌಕರರು, ಯಾವ ಜಾತಿಯವರೇ ಆಗಲಿ, ಹೆಂಡತಿ ಇರುವಾಗಲೇ ಇನ್ನೊಂದೊ ಎರಡೋ ಮೂರೋ ಮದುವೆಮಾಡಿಕೊಳ್ಳಬೇಕಾದರೆ, ಸರ್ಕಾರದ ಅನುಮತಿ ಪಡೆಯಬೇಕಂತೆ.

— ತಾಳಿ ಕಟ್ಟೋಕೆ ದೊಣ್ಣೆನಾಯಕನ ಅಪ್ಪಣೆಯೇ?

* * *

ಜಿನಿವಾ ಸಮ್ಮೇಳನದ ವರದಿಯನ್ನು ಪತ್ರಿಕೆಗಳಲ್ಲಿ ಮೂರು ದಿನಗಳ ಹಿಂದೆಯೇ ಪ್ರಕಟಿಸಿದ್ದರಂತೆ.

—ಸಮ್ಮೇಳನ ಮುಗಿದಮೇಲೆ ಯಾವ ವ್ಯತ್ಯಾಸವನ್ನೂ ಮಾಡಬೇಕಾಗಿರಲಿಲ್ಲವಂತೆ.

* * *

ಆಂಧ್ರದ ಅರ್ಚಕರೆಲ್ಲರೂ ರಾಷ್ಟ್ರಾಧ್ಯಕ್ಷರ ತನಕ ಆಂಧ್ರಸರ್ಕಾರದಮೇಲೆ ದೂರು ತೆಗೆದುಕೊಂಡು ಹೋಗಿರುವರಂತೆ.

—ಅವರ 'ಮಾನ್ಯಂ' ಭೂಮಿಗಳನ್ನು ಸರ್ಕಾರ ವಶಪಡಿಸಿಕೊಂಡರೆ ದೇವರಿಗೆ ನೈವೇದ್ಯ ಇಲ್ಲದಂತಾಗುತ್ತದೆ ಎಂಬ ಕಾರಣವಂತೆ.

* * *

ಸೂರ್ಯನ ಶಾಖವನ್ನು ಸಂಗ್ರಹಿಸಿ ಆಹಾರವನ್ನು ಬೇಯಿಸುತ್ತಾರಂತೆ.

—ಅದೇನು ಮಹಾ! ಚಂದ್ರನ ಕಾಂತಿಯನ್ನು ಸಂಗ್ರಹಿಸಿ ನಮ್ಮನ್ನೇ ಬೇಯುವಂತೆ ಎಷ್ಟೋ ದಿನದಿಂದ ಮಾಡುತ್ತಿದ್ದಾರಲ್ಲಾ!

* * *

ಬೃಹನ್ ಮೈಸೂರು ನಿರ್ಮಾಣಕ್ಕೆ ವಿರೋಧವನ್ನು ಒಕ್ಕಲಿಗರ ಸಂಘವು ವ್ಯಕ್ತಪಡಿಸಿದೆಯಂತೆ–ಸಕಾರಣಗಳೊಡನೆ—

—ಪ್ರಾಯಶಃ ಎಲ್ಲಾ ಕಾರಣಗಳನ್ನೂ ಹೇಳಿರಲಾರದಲ್ಲವೇ?

* * *

ಬಾಲಕರೆಲ್ಲರೂ ಶಿಕ್ಷಣ ಸಮ್ಮೇಳನಗಳು ಶಾಲಾಕಾಲದಲ್ಲಿ ನಡೆಯಬೇಕೆಂದೂ, ಬೇಸಿಗೆ ರಜದಲ್ಲಿ ಕೂಡದೆಂದು, ಒತ್ತಿ ಹೇಳಿದ್ದಾರೆ

* * *

ಹೂಬತ್ತಿ ಮಾಡುವವರ ಸಂಘವೂ ಕೂಡ ಠರಾಟಿವು ನಿರ್ಣಯಿಸಿತಂತೆ, ಜಲಜನಕ ಬಾಂಬನ್ನು ಬಹಿಷ್ಕರಿಸಬೇಕು, ಅಂತ.

—ಯಾಕೋ ಬಾಂಬು ಸಿಡಿದಾಗ ಹೂಬತ್ತಿಯಂತೆ ಇರುತ್ತೆ ಅಂತಲೇ?

* * *

ಚೆನ್ನಪಟ್ಟಣದ ಮೇಲೆ ಅಖಿಲಮೈಸೂರಿನ ಕಣ್ಣಂತೆ.

— ಚೆನ್ನಪಟ್ಟಣದ ಹಿಂದಿನ ಚರಿತ್ರೆಯಲ್ಲಿ, ದೊಂಬಿ. ಗಲಭೆ, ಸಮರಸರಸ.

ಇನ್ನಾದರೂ ಚೆನ್ನಾದೀತೆ?

* * *

—o—

# ಉರಿಗಾಳು

—

ಮಳೆಗಾಳಿ ಬರುವ ಸೂಚನೆಗಳನ್ನು ಬೆಕ್ಕುಗಳು ಬಲುಬೇಗ ಪತ್ತೆ ಹಚ್ಚುತ್ತವೆ.

....ಹೌದು! ನಮಗೇನಾದರೂ ಅನಾಹುತವಾಗುವುದನ್ನೂ ಅವು ಪತ್ತೆಹಚ್ಚಿ, ಅಡ್ಡ ಬಂದು ತಿಳಿಸುತ್ತವೆ.

* * *

ನಾಯಿ ಕೆಮ್ಮಲಿರುವ ಮಕ್ಕಳನ್ನು ಅಮೇರಿಕಾದಲ್ಲಿ ಜನ ಏರೋಪ್ಲೇನಲ್ಲಿ ಕೂರಿಸಿ ಅಂತರಿಕ್ಷದಲ್ಲಿ ಸುತ್ತಾಡಿಸುತ್ತಾರಂತೆ, ಅದು ವಾಸಿಯಾಗಲೆಂದು........ಬೆಂಗಳೂರಲ್ಲಿ, ಅಂಥಮಕ್ಕಳನ್ನು ಸಿನಿಮ ಮಂದಿರಗಳಿಗೆ ತರುತ್ತಾರೆ, ತಾಯಂದಿರು.

* * *

ಫ್ರೆಂಚ್ ವಸಾಹತುಗಳಿಗೆ ಕಾಯಿಪಲ್ಯಗಳನ್ನು ರವಾನಿಸಕೂಡದು ಎಂಬ ಆಜ್ಞೆಯನ್ನು ಇಂಡಿಯಾಸರ್ಕಾರ ರದ್ದುಗೊಳಿಸಿದೆ.... ಹೌದು, ಟೊಮಾಟೊಗಳು ಬೇಡವೆ ಅವರಿಗೆ, ಮೀಟಿಂಗ್ ನಡೆಯಿಸುವುದಕ್ಕೆ ?

* * *

ಅಪರಾಧಿಗಳನ್ನು ಪತ್ತೆಹಚ್ಚಿದ ಸುಮಾರು ೨೦೦ ಪೋಲೀಸಿನವರಿಗೆ ಹಾಸನದ ಸಮಾರಂಭದಲ್ಲಿ "ಬಹುಮಾನಗಳನ್ನು" ಹಂಚಲಾಯಿತು (ಸುದ್ದಿ) ಪತ್ತೆಯಾಗದ ಸುಮಾರು ೨೦೦೦ ಅಪರಾಧಿಗಳಿಗೆ ಬಹುಮಾನ ಹಂಚುವ ಸಮಾರಂಭ ಎಂದು ನಡೆಯುತ್ತದೋ, ನೋಡಬೇಕು

" * *

ಕರ್ನಾಟಕದ ಎಲ್ಲಪಕ್ಷಗಳ ಪ್ರತಿನಿಧಿಗಳೂ ಮೇ ೮, ೯ ರಲ್ಲಿ ದಾವಣಗೆರೆಯಲ್ಲಿ ಒಟ್ಟುಸೇರಿ ಏಕೀಕರಣ ವರದಿಯನ್ನು ಚರ್ಚಿಸುವರು (ಸುದ್ದಿ) ಒಬ್ಬರಮಾತು ಮತ್ತೊಬ್ಬರಿಗೆ ಕೇಳಿಸದೆ ಇದ್ದರೆ ಚೆನ್ನ.

* * *

ಅಸೆಂಬ್ಲಿಸದಸ್ಯರು ಯಾರಾದರೊಬ್ಬರು ಸರ್ಕಾರಿ ನೌಕರರ ವಿಷಯವಾಗಿ ಶಿಫಾರ್ಸು ಮಾಡಿದರೆ, ಅವರನ್ನು ಶಿಕ್ಷೆಗೆ ಗುರಿಮಾಡಲಾಗುವುದೆಂದು ಆಂಧ್ರಸರ್ಕಾರ ಘೋಷಿಸಿದೆ........ಅಸೆಂಬ್ಲಿ ಸದಸ್ಯರು ಇದಕ್ಕೆ ಒಪ್ಪಲಾರರು.

* * *

ಹುಳಬಿದ್ದ ರಾಗಿ ಬೀಜವನ್ನು ಸರ್ಕಾರಿ ಡಿಪೋಗಳಿಂದ ತೆಗೆದುಕೊಂಡು, ಅವನ್ನು ಬಿತ್ತಿ ವ್ಯವಸಾಯಮಾಡಿ ನಷ್ಟಹೊಂದಿದ ರೈತರು ಭೂಕಂದಾಯ ಕೊಡಬೇಕಾಗಿಲ್ಲ, ವೆಂದು ಸರ್ಕಾರ ಆಜ್ಞಾಪಿಸಿದೆ....ಈಸಲ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಫೆಯಿಲಾದ ಸರ್ಕಾರಿಶಾಲಾ ಹುಡುಗರಿಗೆ ಇದೇ ತತ್ವವನ್ನನುಸರಿಸಿ, ಫೀಜನ್ನು ಹಿಂತಿರುಗಿಸಲಾಗುವುದು, ಎಂಬ ಸುದ್ದಿ ಹರಡಿದೆ.

* * *

ಮಕ್ಕಳಿಗೋಸ್ಕರವಾಗಿಯೇ ಹಲವು ಚಿತ್ರಗಳನ್ನು ತಯಾರಿಸಬೇಕೆಂದು ಡಾ|| ಕೇಸ್ಕರ್‌ರವರು ಸಲಹೆ ಇತ್ತರು........ಏಕೆಂದರೆ, ಮಕ್ಕಳಿಗೋಸ್ಕರವೇ ಈಗ ದೊಡ್ಡವರು ಸಿನಿಮ ನೋಡುತ್ತಿರುವುದು.

* * *

ಕರ್ನೂಲಿನಲ್ಲಿ ಯಾವ ರೇಡಿಯೋ ನಿಲಯವೂ ಚೆನ್ನಾಗಿ ಕೇಳುತ್ತಿಲ್ಲ (ಸುದ್ದಿ)
ಪುಣ್ಯವಂತರು.

* * *

ಸಂಸ್ಕೃತ ಪಂಡಿತರುಗಳಿಗೂ ಇತರ ಉಪಾಧ್ಯಾಯರುಗಳಿಗೂ ಸಂಬಳದಲ್ಲಿ ಯಾವ ವ್ಯತ್ಯಾಸವೂ ಇರಕೂಡದು (ಡಾ|| ರಾಜೇಂದ್ರ ಪ್ರಸಾದ್) ಹಾಗಾದರೆ, ಪಾಪ, ಇತರ ಉಪಾಧ್ಯಾಯರುಗಳ ಪಾಡು ಕಷ್ಟ.

* * *

"ಒಂದುವರ್ಷದ ಯೋಜನೆಯಾದರೆ, ದವಸಧಾನ್ಯದ ಬೆಳೆ; ಹತ್ತುವರ್ಷದ ಯೋಜನೆಯಾದರೆ, ಮರನೆಡುವಿಕೆ; ನೂರುವರ್ಷದ ಯೋಜನೆಯಾದರೆ, ಸತ್ ಸಂತಾನಾಭಿವೃದ್ಧಿ" (ಡಾ|| ನಟರಾಜನ್) ಐದುವರ್ಷದ ಯೋಜನೆಯಾದರೆ, ಬರಿಯ ಸಂತಾನಾಭಿವೃದ್ಧಿ,

* * *

ಅಮೇರಿಕಾ ಪಾಕಿಸ್ತಾನಕ್ಕೆ ನೀಡುವ ಸೈನ್ಯಸಹಾಯವನ್ನು ಪೂರ್ವ ಪಾಕಿಸ್ತಾನ ನಿರಾಕರಿಸುವುದರಿಂದ, ಅದನ್ನೇ ಪಾಕಿಸ್ತಾನ ಅಮೇರಿಕಾಕ್ಕೆ ನೀಡುವ ಸಹಾಯವೆಂದು ಸ್ಪಷ್ಟೀಕರಿಸಲು ಮಹಮ್ಮದ್ ಅಲಿ ನಿರ್ಧರಿಸಿರುವರಂತೆ.

* * *

——o——

# ಕೊರವನ ಮಕ್ಕಳ ಪುಸ್ತಕ

೧

ಮೊದಲನೆಯ ಪಾಠ.

ಸರ-ಕಾರ— ಅಮ್ಮ—

**ಸರ-ಕಾರ ಸುಂಕ ಬದುಕು ಸಾವು**

**ಸಹ-ಕಾರ ಮುಂಕ ತೆರಿಗೆ ತೆರಿಗೆ**

ಸರ-ಕಾರ ನಮ್ಮನು ಸಲಹುತ್ತೆ. ಅಮ್ಮ ನಮ್ಮನ್ನು ಸಲಹು-ತ್ತಾಳೆ. ಆದುದ-ರಿಂದ ಸರ-ಕಾರ ಅಮ್ಮ-ನಂತೇ!

ಅಮ್ಮನ ಋಣ, ಸರ-ಕಾರದ ಋಣದಂತೇನೆ! ಜೀವ ಇರುವ ತನಕ ತೀರಿಸಲು ಆಗು-ವುದಿಲ್ಲ. ಸತ್ತನೇಲೆ ಕೂಡ ಸಾಧ್ಯ ಇಲ್ಲ. ಸಾವಿನ ತೆರಿಗೆ ಇದಕ್ಕೆ ಕಾರಣ. ಅಮ್ಮನ ಪ್ರೀತಿಯೇ ಸಾವಿನ ತೆರಿಗೆಗೆ ಕಾರಣ

ಮಕ್ಕಳು ಅತ್ತರೆ ಅಮ್ಮ ತಿಂಡಿ ಕೊಡುತ್ತಾಳೆ. ಮಕ್ಕಳು ತಿಂದು ನಗುತ್ತವೆ. ಅಮ್ಮ ಅತ್ತರೆ ಮಕ್ಕಳಿಗೆ ಏಟು! ಮಕ್ಕಳೂ ಅಳುತ್ತವೆ. ಅಮ್ಮ ದೆಹಲಿಗೆ ಹೋಗುತ್ತಾಳೆ.

ಮಕ್ಕಳು ಓಟು ಕೊಟ್ಟರೆ ಅಮ್ಮ ನಗುತ್ತಾಳೆ. ಮಕ್ಕಳು "ತಿಂಡಿ, ತಿಂಡಿ" ಎಂದು ಅಳುತ್ತವೆ. ಅಮ್ಮ ಏಟು ಕೊಡುತ್ತಾಳೆ. "ಅಮ್ಮಾ! ಅಯ್ಯೋ! ಅಮ್ಮಾ!" ಎಂದು ಅಳುತ್ತವೆ, ಮಕ್ಕಳು.

ರಾಮು ಸುಂಕ ಕೊಟ್ಟ. ಭೀಮು ಸುಂಕ ಕೊಟ್ಟ. ಸೋಮು ಸುಂಕದ ಲೆಕ್ಕ ಟ್ಟ. ಮುಂಕ ಯಾರು?

ಸರಕಾರ ಹೇಳಿತು, ಸಹಕಾರ ಬೇಕು, ರಾಜ್ಯಕ್ಕೆ! ಅಮ್ಮ ಅಂದಳು, ಮಕ್ಕಳ ಸಹಕಾರ ಬೇಕು, ಸಂಸಾರಕ್ಕೆ! ಸಹಕಾರ ಕೊಟ್ಟರು ಕೊಟ್ಟವರು ಕೆಟ್ಟರು. ಮಿಕ್ಕವರು ಬಿರುದು ಪಡೆದರು.

ಹೇಳಿ ಬರೆಯಿಸಿ:—

| | | |
|---|---|---|
| ಸುಂಕ, | ತೆರಿಗೆ, | ಮುಂಕ. |
| ಲೆಕ್ಕ, | ಪಕ್ಕ, | ಬಿರುದು. |

## "ಆಡಿಟ್ ಅಬ್ಜಕ್ಷನ್"

—— o ——

ಮಲ್ಲೇಶ್ವರ—
ಬೆಂಗಳೂರು
೧೪-೩-೫೪

ಪ್ರಿಯ ಕಮಲಾ,

ನಿನ್ನೆಯ ದಿನವೇ ನಿನಗೆ ಈ ಕಾಗದ ಬರೆಯಬೇಕಾಗಿತ್ತು. ಈ ದಿನವೇ ನಿನ್ನ ಮದುವೆಯ ಮೂರನೇ ವರ್ಷದ ಹಬ್ಬ! ಆ ಹೊತ್ತಿಗೆ ಈ ಕಾಗದ ನಮ್ಮ ಶುಭಾಶಯಗಳೊಡನೆ ನಿನಗೆ ತಲಪಲಿ ಎಂದುಕೊಂಡಿದ್ದೆ. ಆದರೆ ನಿನ್ನೆ ಮಧ್ಯಾಹ್ನ ನಮ್ಮ ಯಜಮಾನರು ಕಛೇರಿಯಿಂದ ಬೇಗ ಬಂದುಬಿಟ್ಟಿದ್ದರು. ಅವರ ಕಛೇರಿಯಲ್ಲಿ ಅವರ 'ಬಿಲ್' ಒಂದಕ್ಕೆ ಆಡಿಟ್ ಅಬ್ಜಕ್ಷನ್ ಹಾಕಿದ್ದರಂತೆ. ಇವರಿಗೆ ರೇಗಿ ಆಡಿಟರ್ ಕಛೇರಿಗೆ ಹೋಗಿದ್ದರಂತೆ. ಅಲ್ಲಿ ಆಡಿಟರಿಗೆ ಎಷ್ಟು ನ್ಯಾಯವಾಗಿ ಹೇಳಿದರೂ, ಎಷ್ಟು ಸಕಾರಣವಾಗಿ ವಿವರಿಸಿದರೂ ಆತ ಒಪ್ಪಲಿಲ್ಲವಂತೆ. ಏನೋ ಮನಸ್ಸಿಗೆ ಬೇಜಾರಾಗಿ ಹಿಂತಿರುಗಿ ಕಛೇರಿಗೆ ಹೋಗದೆ ಮನೆಗೆ ಬಂದುಬಿಟ್ಟರಂತೆ. ಅವರನ್ನ ಸಮಾಧಾನಮಾಡಲು ರವೆ ಉಪ್ಪಿಟ್ಟು, ಬಾಳೆಕಾಯಿ ಬೋಂಡ ಮಾಡಲು ಶುರು ಮಾಡಿದೆ. ಆ ಗಲಾಟೆಯಲ್ಲಿ ಅಂಚೆ ವೇಳೆ ಆಗಿಹೋಗಿತ್ತು. ಅಂದಮೇಲೆ ಕಾಗದ ಹೇಗೂ ವಿಳಂಬವಾಗುತ್ತೆ. ಆದರೂ ಮದುವೆಯ ವರ್ಷದ ಹಬ್ಬಕ್ಕಲ್ಲದಿದ್ದರೂ, ಮಾರನೆಯ ಹಬ್ಬಕ್ಕಾದರೂ ತಲಪುತ್ತೆ ಎಂದು ಈ ದಿನ ಬರೆದು ಕಳಿಸಿದ್ದೇನೆ. ಈ ದಿನದ ಸವಿನೆನಪು ಬಹಳ ವರ್ಷಗಳು ನಿಮಗೆ ದೊರಕಲಿ ಎಂದು ಹಾರೈಸಿ ಆಶೀರ್ವದಿಸುತ್ತೇನೆ. ನಿಮ್ಮ ಯಜಮಾನರಿಗೂ ನಮ್ಮ ಶುಭಾಶಯಗಳನ್ನು ತಿಳಿಸುವುದು. ಮುಂದಿನ ವರ್ಷದ ಹಬ್ಬಕ್ಕಾದರೂ ನಿಮ್ಮಿಬ್ಬರಿಗೆ ಮಾತ್ರ ಅಲ್ಲದೆ, ನಿಮ್ಮ ಮುದ್ದು ಮಗುವಿಗೂ ಶುಭಾಶಯಗಳನ್ನು ಕಳಿಸುವಂತಾಗಲೆಂದು ತುಂಬಾ ಆಶೆಪಡುತ್ತೇನೆ.

ಇಲ್ಲಿ ಎಲ್ಲರೂ ಚೆಂದಾಗಿದ್ದೇವೆ.

ನಿನ್ನ ಗೆಳತಿ
**ಲಲ್ಲು**

* * *

ಬಸವನಗುಡಿ
ಬೆಂಗಳೂರು
ತಾ|| ೧೬-೩-೫೪

**ಪ್ರಿಯ ಲಲ್ಲೂ,**

ನಿನ್ನ ಕಾಗದ ಬಂದು ನನ್ನನ್ನು ತಳಮಳಗೊಳಿಸಿತು. ಮದುವೆಯ ವಾರಸೆಯ ಹಬ್ಬದ ನೆನಪಲ್ಲಾ ಅದಕ್ಕೆ ಕಾರಣ! ಆಡಿಟ್ ಅಬ್ಜಕ್ಷನ್ ಸೂಚಿಸಿದ ಫಲವೇ ಅದು. ನಿನ್ನೆಯ ದಿನವೇ ಪ್ರತ್ಯುತ್ತರ ಬರೆಯೋಣ ಎಂದಿದ್ದೆ. ಆದರೆ 'ಇವರಿಗೂ' ಕಾಗದ ತೋರಿಸಿ ಅವರ ಮನೋಪ್ರವೃತ್ತಿಯ ವೈಪರೀತ್ಯವನ್ನೂ ತಿಳಿಸೋಣ ಎಂದು 'ಇವ ತ್ತಿನ ತನಕ ಮುಂದುವರಿಸಿದೆ, ಅಮ್ಮನ ಸಲಹೆ ಪ್ರಕಾರ.

ರಾತ್ರಿ ತಾಂಬೂಲ ಕೊಟ್ಟಾಗ ನಿನ್ನ ಕಾಗದವನ್ನೂ ಕೊಟ್ಟೆ. ಅವರು ಓದಿದ ಮೇಲೆ ನಸುನಕ್ಕು ನಿನ್ನ ಗೆಳತಿಗೆ ನೀನು ಕಾಗದಬರಿ, ನನಗಾದರೂ ಯಾಕೆ ತೋರಿ ಸಿದೆ? ಎಂದಂದರು.

'ಇವರಿಗೆ' ಯಾಕೋ ಮನಸ್ಸು ಸ್ಥಿಮಿತವಿಲ್ಲ ಎಂದಂದುಕೊಂಡು ಮಾತನ್ನು ಮುಂದುವರಿಸಲಿಲ್ಲ.

ನಿನ್ನ ಕಾಗದಕ್ಕೆ ಉತ್ತರ ಬರೆಯುವುದನ್ನೂ ಮುಂದುವರಿಸಿದ್ದರಿಂದ ಏನೂ ಪ್ರಯೋಜನವಾಗಲಿಲ್ಲ.

ಆದರೂ ನಿನ್ನ ಯಜಮಾನರು ಆಡಿಟ್ ಅಬ್ಜಕ್ಷನ್‌ಗೆ ರೇಗಿ ಕಛೇರಿಗೆ ಹೋಗದೆ ಮನೆಗೆ ಬಂದರು ಅಂತ ಬರೆದಿದ್ದಿ. ಮುಂದಿನ ಮಾತುಕತೆಗಳು ಏನು? ಎಲ್ಲವನ್ನೂ ವಿಶದವಾಗಿ ಬರಿ, ನಿನ್ನ ಮುಂದಿನ ಕಾಗದದಲ್ಲಿ.

ನಿನ್ನ ಶುಭಾಶಯಗಳು ಸಾರ್ಥಕ.

ನಿನ್ನವಳೇ ಆದ
**ತಂಗಿ ಕಮ್ಮು**

* * *

ಮಲ್ಲೇಶ್ವರ
೧೮-೩ ೫೪

**ಪ್ರಿಯ ಕಮ್ಮು,**

ನಿನ್ನ ಕಾಗದ ಓದಿ ಬಲು ಹಿತವಾಯಿತು. ಇದೇರೀತಿ ನಿನಗೆ ಸುಖಜೀವನ ದೊರೆಯಲಿ ಎಂದು ಹಾರೈಸುತ್ತೇನೆ. ಆದರೂ ತಾಳ್ಮೆಯಿಂದ ನೀನು ನಿನ್ನ ಯಜ ಮಾನರ ಮನೋಪ್ರವೃತ್ತಿಯ ರೂಪು ರೇಖೆಗಳನ್ನೂ ತಿಳಿದು ನನಗೆ ಬರೆಯಬೇಕು.

ನಿಮ್ಮ ಅಮ್ಮನ ಸಲಹೆ ಪಡೆದರೆ ನೀನು ಕೃತ ಕೃತ್ಯಳಾಗುವೆ. ಹಣವಂತ ಜಮೀನ್ದಾರನನ್ನೂ, ಕಿರಿವಯಸ್ಸಿನ ಸ್ಫುರದ್ರೂಪಿಯನ್ನೂ, ಈ ದಕ್ಷಿಣ ಭಾರತದ ಮಗಳು ತನ್ನ ಕಿರುಬೆರಳಿನಲ್ಲಿ ಆಡಿಸುತ್ತಿದ್ದುದನ್ನು ಕೇಳಿದರೆ ಎಂತಹ ಜಾಣೆ! ಎಷ್ಟು ಶಹಣೆ! ಎಂದು ಎಲ್ಲರಿಗೂ ಅನ್ನಿಸುತ್ತಿತ್ತು. ಅಂತಹಾಕೆಯನ್ನು ತಾಯಿಯಾಗಿ ಪಡೆದ ನಿನ್ನ ಅದೃಷ್ಟಕ್ಕೆ ಮಿತಿಯೇ ಇಲ್ಲ.

ಆದಿನ ಯಜಮಾನರ ಮಾತುಕತೆಗಳೇನು ಎಂದು ಕೇಳಿದ್ದಿ. ರವೆ ಉಪ್ಪಿಟ್ಟು ಬಾಳೆಕಾಯಿ ಬೋಂಡ ಸಿದ್ಧವಾಗುವ ಹೊತ್ತಿಗೆ ಸಂಜೆ ನಾಲ್ಕುಗಂಟೆಯಾಗಿತ್ತು. ಇನ್ನೇನು! ಅಡಿಗೆ ಮನೆಯಿಂದ ತಂದುಕೊಡಬೇಕು ಅನ್ನೋ ಹೊತ್ತಿಗೆ ಅವರ ಚಿಕ್ಕ ಸಾಹೇಬರು ಮನೆಗೆ ಬಂದರು. "ಆಡಿಟ್ ಆಫೀಸಿಗೆ ಹೋದವನು, ಅಲ್ಲಿಂದಲೇ ಫೋನ್ ಮಾಡಿದೆ, ಕಛೇರಿಗೆ ಬರುಲ್ಲ, ಮನೆಗೆ ಹೋಗುತ್ತೇನೆ, ಎಂದು, ನಿನಗೆ ಮೈಹುಷಾರಾಗಿರಲಿಲ್ಲವೇನೋ ಎಂದು ಮನಸ್ಸು ಕಾತುರಗೊಂಡಿತ್ತು. ಅದಕ್ಕೇ ನಾನೂ ಬೇಗ ಕಛೇರಿಯಿಂದ ಹಿಂದುರಿಗಿ ನಿನ್ನನ್ನು ನೋಡಲು ಬಂದೆ" ಎಂದು ಹೇಳಿದರು.

ನನ್ನ ಪಾಲಿನ ರವೆ ಉಪ್ಪಿಟ್ಟು, ಬಾಳೆಕಾಯಿ ಬೋಂಡವನ್ನೂ ಇನ್ನೊಂದು ತಟ್ಟೆಯಲ್ಲಿಟ್ಟು—ಇಬ್ಬರಿಗೂ ಕೊಟ್ಟು ಬಂದೆ.

ಸ್ವಲ್ಪ ಕೋಪ ಏನೋ ಬಂದಿತ್ತು ನನಗೆ, ಯಜಮಾನರ ಕೋಪ ನಾನು ತೀರಿಸಬಹುದು ಎಂದು ಆಶಿಪಟ್ಟುಕೊಂಡಿದ್ದಾಗ ಈ ಸ್ನೇಹಿತಬೇರೆ ವಕ್ರವಾಗಿ ಬಂದನಲ್ಲಾ! ಎಂದು, ಅದಕ್ಕೇ ಕಿವಿಗೊಟ್ಟುಕೊಂಡು ಅವರ ಸಂಭಾಷಣೆ ಕೇಳಿದೆ. ಚಾಚೂ ತಪ್ಪದೆ ಹೇಳಿದ್ದನ್ನ ಬರೆಯುತ್ತಿದ್ದೇನೆ.

**ಇವರು:**—"ನನಗೆ ಮೈಯೇನೋ ಹುಷಾರಾಗಿದೆ. ಆದರೆ ಆ ಆಡಿಟ್ ಅಬ್ಜಕ್ಷನ್ ನೋಡಿದಾಗ ಬಲುರೇಗಿಹೋಯ್ತು— ಆಡಿಟರಿಗೆ, ಗಿಣಿಗೆ ಹೇಳುವಹಾಗೆ ವಿಶದೀಕರಿಸಿದೆ. ಆತ ಒಪ್ಪಲಿಲ್ಲ. ಒದ್ದು ಬಿಡೋಣವೇ ಎನಿಸಿತು ಆದರೆ ಈ ಹಾಳು ನಾಗರೀಕತೆ ಅಡ್ಡಬಂದು ಒದೆಯಲು ಆಗಲಿಲ್ಲ. ಮನಸ್ಸೂ ಕೆಟ್ಟು ಮೈಉರಿಯುತ್ತಿತ್ತಾದ್ದರಿಂದ ನಿಮಗೆ ಫೋನ್‌ಮಾಡಿ ಮನೆಗೆ ಬಂದೆ ಅಷ್ಟೆ!

**ಆತ:**—"ಯಾಕೆ? ಆಡಿಟರ್ ಏನಂದ?"

**ಇವರು:**—"ಆಡಿಟರ್ ತಲೆ ತಿರುಪತಿಯಾಗ! ಅವನೇನಂದ ಗೊತ್ತೆ? ಸಾರ್! ನೀವೇನೋ ಹೈದ್ರಾಬಾದಿಗೆ ಪ್ರವಾಸ ಹೋದಾಗ ಏರೋಪ್ಲೇನಿನಲ್ಲಿ ಹೋದಿರಿ ದಿಟ! ಆದರೆ ಕಾನೂನು ಪ್ರಕಾರ ಏನಿದೆ ಗೊತ್ತೆ? ರೈಲಿನಲ್ಲಿಯಾಗಲಿ, ರಸ್ತೆಯಲ್ಲಿಯಾಗಲಿ ಹೋದರೆ ಇಷ್ಟುಭತ್ಯ ಕೊಡಬೇಕು ಎಂದಿದೆ. ನೀವು ರೈಲಿನಲ್ಲಿ ಹೋಗಲಿಲ್ಲ. ರಸ್ತೆಯಲ್ಲಿ ಹೋಗಲಿಲ್ಲ ಅಂದಮೇಲೆ ಭತ್ಯ ಹೇಗೆ ಸಾರ್ ಕೊಡೋದು?" ಎಂದ.

ಅಲ್ಲಾ! ಆಡಿಟರ್ ಮಹಾಶಯ! ಕಾನೂನು ಮಾಡಿದಾಗ ಗಾಳಿಯಲ್ಲಿ ಸಂಚಾರಮಾಡೋದು ಇತ್ತಿಲ್ಲ. ಸರ್ಕಾರದ ಕೆಲಸ ಬೇಗ ಆಗಲೆಂದು ಸರ್ಕಾರದ ಹುಕುಂನಂತೆ ನಾನು ಹೋದೆ. ನನಗೆ ಬರೋ ಸಂಬಳದಲ್ಲಿ ಏರೋಪ್ಲೇನ್ ಹಾಗಿರಲಿ, ಏರೋಡ್ರೋಂತನಕ ಜಟ್ಕಾದಲ್ಲಿ ಹೋಗಲು ಕೂಡ ಶಕ್ತಿಇಲ್ಲ. ಬಡವನಾದ ನನ್ನನ್ನು ಹಿಡಿದುಕೊಂಡು ಈ ಭತ್ಯ ಕೊಡಲು ಕಾನೂನುಪ್ರಕಾರ ಸಾಧ್ಯವಿಲ್ಲ, ಮುಂಗಡ ಪಡೆದ ಹಣವನ್ನು ಮುಂದಿನ ತಿಂಗಳು ತೀರಿಸು ಎನ್ನುತ್ತೀರಲ್ಲಾ! ನೀವು! ಮುಂದಿ ತಿಂಗಳು ಮನೆಯವರೆಲ್ಲರೂ ಹೊಟ್ಟೆಯಮೇಲೆ ಒದ್ದೆಬಟ್ಟೆ ಹಾಕಿಕೊಂಡು ಇರೋಣವೇ? ಎಂದೆ.

"ಕಾನೂನುಪ್ರಕಾರ ನೀವು ಹಾಗೇ ಮಾಡಬೇಕು" ಎಂದ ಆತ.

ಆತನ ಮುತ್ತಜ್ಜಿ ಅಜ್ಜಿ, ಅಮ್ಮನನ್ನೂ ಇವನನ್ನು ಹೆತ್ತಿದ್ದಕ್ಕಾಗಿ ಮನಸಿನಲ್ಲೇ ಸ್ಮರಿಸಿ ನಾನು ಹಿಂತಿರುಗಿದೆ. ಆ ಅವಸ್ಥೆಯಲ್ಲಿ ಕಛೇರಿಗೆ ಹಿಂತಿರುಗುವುದು ಕ್ಷೇಮ ವಲ್ಲಾ ಎಂದು ಮನೆಗೆ ಬಂದೆ ಅಷ್ಟೆ!

**ಅವರು:**—"ಅಯ್ಯೊ! ಇದಕ್ಕಾಗಿ ರೇಗೋದೇ! ಆ ಆಡಿಟ್‌ನವರೆಲ್ಲಾ ಅದೇ ಜಾತಿ ಕಣಯ್ಯ! ನನಗೆ ಒಂದು ಸಾರ್ತಿ ಏನುಮಾಡಿದರು ಗೊತ್ತೆ?

ಆಹಾರ ಶಾಖೆಯಲ್ಲಿ ನಾನು ಕೆಲಸಮಾಡುತ್ತಿದ್ದೆ. ಭತ್ತ ಸಾಗಿಸಲು ಗೋಣೀ ಚೀಲಗಳನ್ನು ಹೇರಳವಾಗಿ ಉಪಯೋಗಿಸುತ್ತಿದ್ದೆವು. ಹರಿದ ಗೋಣೀಚೀಲಗಳನ್ನು ನಾಲ್ಕಾಣೆಯಂತೆ ಮಾರುವುದೆಂದೂ, ಚೆನ್ನಾಗಿದ್ದ ಗೋಣೀಚೀಲಗಳನ್ನು ಒಂದು ರೂಪಾಯಿನಂತೆ ಮಾರುವುದೆಂದೂ ಹುಕುಂ ಆಗಿತ್ತು. ಆದರೆ ಹರಿದ ಗೋಣೀ ಚೀಲಗಳನ್ನು ಒಂದರೊಳಗೆ ಇನ್ನೊಂದನ್ನಿಟ್ಟು ಕೆಲವುಕಾಲ ಉಪಯೋಗಿಸಿದೆ. ನಂತರ ಉಪಯೋಗವಿಲ್ಲದಾಗ ನಾಲ್ಕಾಣೆಯಂತೆ ಮಾರಿದೆ. ಆದಕ್ಕೆ ಆಡಿಟ್ ಅಬ್ಜೆಕ್ಷನ್ ಏನು ಗೊತ್ತೆ "ಹರಿದಗೋಣಿಚೀಲದಲ್ಲಿ, ಹರಿದ ಗೋಣಿಚೀಲ ಇಟ್ಟರೂ, ಭತ್ತ ಹೊರಗೆ ಸುರಿದೇ ಬರುತ್ತೆ, ಅಂದಮೇಲೆ ಗೋಣಿಚೀಲ ಚೆನ್ನಾಗಿಯೇ ಇದ್ದಿರ ಬೇಕು ಒಂದು ರೂಪಾಯಿಗೆ ಮಾರಬೇಕಾಗಿತ್ತು. ಈ ಕರ್ತವ್ಯಲೋಪದಿಂದ, ಆಫೀಸರ ಅಜಾಗರೂಕತೆಯಿಂದ ಸರ್ಕಾರಕ್ಕೆ ೧೦೦೦ ರೂಪಾಯಿ ನಷ್ಟವಾಗಿದೆ. ಇದನ್ನು ಆತನ ಸಂಬಳದಲ್ಲಿ ಹಿಡಿಯಬೇಕು" ಎಂದು. ನಾನು ಪ್ರತ್ಯುತ್ತರವಾಗಿ ವರದೀ ಕಳಿಸಿದೆ. ಒಂದು ಗೋಣಿಚೀಲದಲ್ಲಿ ತೂತಿದ್ದ ಕಡೆಯೇ ಇನ್ನೊಂದರಲ್ಲೂ ತೂತಿನ ಗೋಣಿ ಇರುತ್ತೆ ಅನ್ನೋದು ದಿಟವಲ್ಲ. ಇದಕ್ಕೆ ಇಲ್ಲಿ ತೂತಿದ್ದರೆ, ಅದಕ್ಕೆ ಅಲ್ಲಿ ತೂತು. ಹೀಗೆ ಚೀಲದಲ್ಲಿ ಇನ್ನೊಂದು ತೂತಿನ ಗೋಣಿಚೀಲ ತುರುಕಿ,ಭತ್ತ ತುಂಬಿದರೆ ಭತ್ತ ಹೊರಗೆ ಸುರಿಯುವುದಿಲ್ಲ. ಅಂದಮೇಲೆ ನಾಲ್ಕಾಣೆಗೆ ಮಾರಿದ್ದು ನ್ಯಾಯ. ಸರ್ಕಾರಕ್ಕೆ ೧೦೦೦ ರೂಪಾಯಿ ನಷ್ಟವಾಗಿಲ್ಲ. ಅದರಬದಲು ಹೊಸಗೋಣಿಚೀಲ ಕೊಳ್ಳುವುದಕ್ಕೆ ಬೇಕಾದ ೨೦೦೦ ರೂಪಾಯಿ ಲಾಭವಾಗಿದೆ. ಅಂದರೆ ನ್ಯಾಯವಾಗಿ

ಕರ್ತವ್ಯಲೋಪವನ್ಮಾಡದೆ, ಜಾಗರೂಕನಾಗಿದ್ದುದರಿಂದ, ನನಗೆ ಆ ಲಾಭದಲ್ಲಿ ಒಂದು ಭಾಗವನ್ನು ಕೊಡಬೇಕು. ಎಂದು ಸವಾಲುಹಾಕಿದೆ.

ಈ ಎರಡು ಪಕ್ಷದ ಸವಾಲುಗಳನ್ನು ಸರ್ಕಾರವು ಅಂತಿಮ ನಿರ್ಣಯಕ್ಕೆ ಆಡಿಟರ್ ಪಿತ, ಪಿತಾಮಹ, ಪ್ರಪಿತಾಮಹನಿಗೆ ಕಳಿಸಿದರು. ಎಲ್ಲರೂ ಒಂದೇ ಗೋತ್ರದವರು, ಒಂದೇ ಬುಡಕಟ್ಟು, ಪ್ರಪಿತಾಮಹನಾದ ಆಡಿಟರ್ ಜನರಲ್, ಪಿತಾಮಹನಾದ ಅಕೌಂಟೆಂಟ್ ಜನರಲ್, ಪಿತನಾದ, ಡೆಪ್ಯುಟಿ ಆಡಿಟರ್, ಎಲ್ಲರೂ, ಗೋತ್ರೋದ್ಭವ ಆಡಿಟರನ ವಾದವನ್ನೇ ಸಮರ್ಥಿಸಿದರು.

ಕಡೆಗೆ ಸರ್ಕಾರ ನನ್ನನ್ನು ಕರೆಸಿ ಏನುಹೇಳಿತು ಗೊತ್ತೆ? "ಅಯ್ಯಾ! ನಿನ್ನ ವಾದದಲ್ಲಿ ಸತ್ಯವಿದೆ, ತಿರುಳಿದೆ. ಆದರೆ ನಿನ್ನಂತೆ ನಾವೂ ಕೂಡ ಆಡಿಟ್ ರಾಕ್ಷಸನಿಗೆ ವರಕೊಟ್ಟಿದ್ದೇವೆ. ಅವನ ತೀರ್ಮಾನಕ್ಕೆ ತಲೆತಗ್ಗಿಸುತ್ತೇವೆ ಎಂದು. ಆದಕಾರಣ ನೀನು ೧೦೦೦೦ ರೂಪಾಯಿ ದಂಡ ತೆರಲೇಬೇಕು. ಮುಂದೆ ನಿನ್ನ ಬುದ್ಧಿಗೆ ತೋಚಿದಂತೆ ಆಡಿಟ್ ಅಬ್ಜಕ್ಷನ್‌ಗೆ ಸಿಗದೆ ಆ ರೂಪಾಯನ್ನ ಸರಿಪಡಿಸಿಕೋ! ನಾವು ಕಣ್ಣು ಮುಚ್ಚಿಕೊಂಡಿರುತ್ತೇವೆ ಎಂದರು.

ಮುಂದಿನ ಸಾಲಿಗೆ, ೧೦ ಸಾವಿರ ಒಳ್ಳೆಯ ಗೋಣಿಚೀಲಗಳನ್ನ ತೂತಾದುವು ಎಂದು ನಿಷ್ಕರ್ಷಿಸಿ, ೨೫೦೦ ರೂಪಾಯಿಗೆ ಮಾರಿದೆ ಬಂದುದರಲ್ಲೇ ಮಗಳ ಮದುವೆ ಮಾಡಿದೆ. ಆಡಿಟ್ ಅಬ್ಜಕ್ಷನ್ ಇಲ್ಲ. ಸರ್ಕಾರ ತಲೆಯಾಡಿಸಲಿಲ್ಲ.

ಯಾಕೆ ಹೇಳುಕ್ಕೆಬಂದೆ ಗೊತ್ತೆ? ಆಡಿಟ್ ಅಬ್ಜಕ್ಷನ್ ಬಂದಾಗ ತಲೆತಗ್ಗಿಸು. ತಲೆತಗ್ಗಿಸಿ ಯೋಚನೆಮಾಡು ಆಡಿಟರಿಗೆ ಕಾನೂನು ಮುಖ್ಯವೇ ಹೊರತು ಹಣದ ಉಳಿತಾಯವಲ್ಲಾ! ಎಂಬ ಸತ್ಯವನ್ನು ಮನಗಾಣು, ಅಂದಮೇಲೆ ನಿನ್ನ ಭವಿಷ್ಯದಲ್ಲಿ ಚಿನ್ನದಮನೆ, ವಜ್ರದ ಗೋಪುರ, ಮುತ್ತಿನ ಚಪ್ಪರ ಖಂಡಿತ.

**ಇವರು**:—"ನೀನು ಹೇಳಿದ್ದು ದಿಟ ಕಣಯ್ಯಾ! ನನಗೂ ಹಾಗೇ ಸತ್ಯದ ಸ್ವರೂಪು ಕಣ್ಣಿಗೆ ಕಾಣಿಸುತ್ತಿದೆ. ನಿಮ್ಮಂತೆ ನಾನೂ ಮುಂದೆ ಹಾಗೇ ಮಾಡುತ್ತೇನೆ."

ಈ ರೀತಿ ಇವರುಗಳ ಸಂಭಾಷಣೆ ನಡೆದಿತ್ತು. ಆಡಿಟರುಗಳು ಇಷ್ಟು ಪೆಚ್ಚು ಅಬ್ಜಕ್ಷನ್ ಹಾಕುತ್ತಾರೆಯೇ? ಎಂದು ನನಗೆ ಅನುಮಾನವೇನೋ ಬಂತು. ಆದರೆ 'ಇವರು' ರೇಗಿದ್ದು ಕಂಡಾಗ ಹಾಗೆ ಆಗಿರಲೇಬೇಕು ಎಂದು ಕೊಂಡೆ.

ಅಂದಹಾಗೆ ನಿನ್ನ ಯಜಮಾನರು ಆಡಿಟರು ಅಲ್ಲವೇನೇ? ಅವರೂ ಈ ರೀತಿ ಪೆಚ್ಚು ಪೆಚ್ಚಾಗಿ ಆಕ್ಷೇಪಣೆ ಹಾಕುತ್ತಾರೇನೇ? ಅಂದರೆ ಮನೆಸಂಸಾರದಲ್ಲೂ ಈ ರೀತಿ ಆಕ್ಷೇಪಣೆಗಳನ್ನು ಹಾಕುತ್ತಾರೆಯೇ?

ಎಲ್ಲದಕ್ಕೂ ವಿಶದವಾಗಿ ಕಾಗದ ಬರಿ.

ನಿನ್ನ ವಿಳಾದ

**ಲಲ್ಲು**

ಬಸವನಗುಡಿ

೨೦–೩–೫೪

**ಪ್ರಿಯ ಲಲ್ಲು,**

ನಿನ್ನ ಕಾಗದ ಓದಿ ನಕ್ಕು ಸಾಕಾಗಿ ಹೋಯ್ತು. ಅಮ್ಮ ಅನಕ ಬಿಕ್ಕಿ ಬಿಕ್ಕಿ ನಕ್ಕು ಹೇಳಿದಳು. "ನಿನ್ನ ಗಂಡನಿಗೂ ಈ ವಿಪರೀತದ ಚಾಳಿ ಇದೆ ಕಣೆ. ಆಗಾಗ್ಗೆ ಕಾಣಿಸಿಕೊಳ್ಳುತ್ತೆ. ಅದು ಸಂಸಾರದಲ್ಲಿ ಕಾಣಿಸದ ಹಾಗೆ ನಾವು ಕಾಪಾಡಬೇಕು" ಅಂತ.

ಸಂಜೆ ಇವರು ಮನೆಗೆ ಬಂದಮೇಲೆ "ಹೀಗೆಲ್ಲಾ ಕಮಲು ಕಾಗದ ಬರೆದಿದ್ದಾಳೆ. ನೀವೂ ಆಡಿಟರು! ಹೀಗೇ ನೀವೂ ಆಕ್ಷೇಪಣೆ ಎತ್ತುತ್ತೀರೇನ್ರಿ" ಎಂದು ಕೇಳಿದೆ, ಊಟ ಆದಮೇಲೆ.

ಎಲ್ಲಿ ಕಾಗದ ಕೊಡು, ಎಂದು ನಿನ್ನ ಕಾಗದ ತೆಗೆದುಕೊಂಡು ಪೂರ್ತಿ ಓದಿ ನಕ್ಕರು. ಇದೇನು ಮಹಾ ನಿದರ್ಶನಗಳು. ನಾನು ಇದಕ್ಕಿಂತ ಹೆಚ್ಚಾಗಿ ದೊಡ್ಡ ದೊಡ್ಡವರಿಗೇ ಕಿರುಕುಳ ಕೊಟ್ಟಿದ್ದೇನೆ. ನಮ್ಮಾಫೀಸಿನ ಜವಾನನ ಮಗನಿಗೆ ಸೀಟುಕೊಡಿ ಎಂದು ಕಾಲೇಜ್ ಪ್ರಿನ್ಸಿಪಾಲರನ್ನ ಕೇಳಿಕೊಂಡಾಗ ಆತ ಆಗೋದಿಲ್ಲ ಎಂದುಬಿಟ್ಟ. ಹೋದವರುಷ ಆದಾದ ಮೂರುತಿಂಗಳಿಗೆ ಅವ ಖಾಯಿಲೆಬಿದ್ದು ಮೂರುತಿಂಗಳು ರಜಾ ತೆಗೆದುಕೊಂಡಿದ್ದ. ನಮ್ಮಲ್ಲಿ ಒಂದುಕಾನೂನಿದೆ. "ರಜಾದ ಮೇಲಿದ್ದವನು ಸಂಬಳ ತೆಗೆದುಕೊಳ್ಳುವುದಕ್ಕೆ ಮೊದಲು ತಾನು ಜೀವಂತನಾಗಿದ್ದೇನೆ ಎಂದು ಇನ್ನೊಬ್ಬರ ಕೈಲಿ ಸರ್ಟಿಫಿಕೇಟ್ ತಂದೊಪ್ಪಿಸಬೇಕು ಎಂದು. ಆತ ಮೊದಲನೆ ತಿಂಗಳು ಸಂಬಳಕ್ಕೆ ಬಿಲ್ ಕಳಿಸಿದಾಗ ಈ ಸರ್ಟಿಫಿಕೇಟ್ ಇತ್ತಿಲ್ಲ. ಸಂಬಳ ಕೊಡಲು, ನಾನು ಆಡಿಟ್ ಅಬ್ಜಕ್ಷನ್ ಹಾಕಿದೆ. ಎರಡನೆ ತಿಂಗಳು ಖಾಯಿಲೆ ಹೆಚ್ಚಾದ್ದರಿಂದ ಆತನೇ ಸಂಬಳಕ್ಕೆ ಬಿಲ್ ಕಳಿಸಲಿಲ್ಲ. ಮೂರನೇ ತಿಂಗಳಾದಾಗ ಆತ ಹುಷಾರಾಗಿ ಕೆಲಸಕ್ಕೆ ಹಿಂತಿರುಗಿದ್ದ. ಮೂರುತಿಂಗಳ ಸಂಬಳಕ್ಕೆ ಬಿಲ್‌ಮಾಡಿ ತಾನೇ ಖುದ್ದಾಗಿ ನನ್ನ ಹತ್ತಿರ ತಂದ ನಾನೇನು ಮಾಡಿದೆ ಗೊತ್ತೆ? 'ಆ ತಿಂಗಳ ಸಂಬಳಕ್ಕೆ ಅನುಮತಿಕೊಟ್ಟು, ಹಿಂದಿನ ಎರಡು ತಿಂಗಳು ರಜಾದಲ್ಲಿದ್ದಾಗ ಜೀವಂತನಾಗಿದ್ದ ಎಂಬ ಸರ್ಟಿಫಿಕೇಟ್ ಕಳಿಸಿಲ್ಲದ ಪ್ರಯುಕ್ತ ಆ ಎರಡು ತಿಂಗಳ ಸಂಬಳ ಕೊಡಲಾಗುವುದಿಲ್ಲ. ಜೀವಂತನಾಗಿದ್ದ ಎಂಬ ಸರ್ಟಿಫಿಕೇಟನ್ನು ತಂದುಕೊಡುವ ತನಕ ಸಂಬಳ ಕೊಡಲಾಗುವುದಿಲ್ಲ' ಎಂದೆ.

ಆತ ಹೇಳಿದ 'ಅದಕ್ಕೆ ಸರ್ಟಿಫಿಕೇಟ್ ಯಾಕೆಸಾರ್! ನಾನೇ ಇಲ್ಲೇ ಇದೀನಲ್ಲಾ ಹೋದ ತಿಂಗಳು ಸತ್ತು ಈ ತಿಂಗಳು ಹುಟ್ಟಿಬರುವುದು ಸಾಧ್ಯವೇ' ಎಂದ.

ಅದೆಲ್ಲಾ ಕಾನೂನಿಗೆ ಗೊತ್ತಿಲ್ಲ—ಕಾನೂನುಪ್ರಕಾರ ನೀವು ನಡೆಯಬೇಕು ಎಂದೆ.

ಜೀವಂತನಾಗಿದ್ದೆ ನಾನು, ಎಂಬ ಸರ್ಟಿಫಿಕೇಟನ್ನು ಜೀವಂತನಾದವನೇ ಕೊಡಬೇಕೋ—ಅಥವಾ ಸತ್ತವರು ಕೊಡಬಹುದೋ ಎಂದು ಆತ ನಯವಾಗಿ ಕೇಳಿದ.

ಕಾನೂನು ನೋಡಿದೆ! ಇನ್ನೊಬ್ಬರ ಸರ್ಟಿಫಿಕೇಟ್ ಅಂತಿದೆಯೇ ಹೊರತು, ಸತ್ತವರಿಂದ, ಬದುಕಿದ್ದವರಿಂದ ಅಂತ ಇಲ್ಲ!! ಯಾರಿಂದ ಬೇಕಾದರೂ ಆಗಬಹುದು, ಕಾನೂನು ಪ್ರಕಾರ ಎಂದೆ.

ಆತ ಅವರ ತಾತನ ಹೆಸರಿನಲ್ಲಿ ಎರಡು ಜೀವಂತ ಸರ್ಟಿಫಿಕೇಟ್ ತಂದೊದಗಿಸಿದ.

ಅದನ್ನೇ ಹಿಡಿದುಕೊಂಡು ಸತ್ತವರು ಇವನ ಸರ್ಟಿಫಿಕೇಟ್‌ಗೆ ರುಜು ಹಾಕಿದ್ದಾರೆ. ಅಂದ ಮೇಲೆ ಈತ ಅವರ ರುಜುವನ್ನು ಫೋರ್ಜ್ ಮಾಡಿದ್ದಾನೆ. ಇದನ್ನು ಪೋಲೀಸಿನವರಿಗೆ ತಿಳಿಸಬೇಕು ಎಂದು ಅಬ್ಜಕ್ಷನ್ ಹಾಕಿದೆ.

ಆತ ರೇಗಿಕೊಂಡು ಹೋಗಿ ನಮ್ಮ ಆಫೀಸರಿಂದ, ದೊರೆತನಕ ದೂರು ಹೇಳಿಕೊಂಡ. ಸಂಬಳ ಮಾತ್ರ ಸಿಗಲಿಲ್ಲ. ಕಡೆಗೆ ನನ್ನ ಹತ್ತಿರಕ್ಕೇ ಬಂದು, ಮುಂದಿನ ವರ್ಷ ನೀವು ಹೇಳಿದ ಹುಡುಗನಿಗೆ ಸೀಟ್ ಕೊಡುತ್ತೇನೆ ಎಂದು ಗೋಗರೆದ. ಆ ಮೇಲೆ ನನಗೇ ಕನಿಕರ ಬಂದು, ಕಾನೂನು ಸಂದಿಗಳಲ್ಲಿ ಮಾರ್ಗ ತೋರಿಸಿ ಸಂಬಳ ಕೊಡಿಸಿದೆ."

ಎಂದು ಜಂಭ ಕೊಚ್ಚಿಕೊಂಡರು.

ಆದರೆ ನೋಡು ಲಲ್ಲು! ಮನೆ ಸಂಸಾರದಲ್ಲಿ ಈ ರೀತಿ ಆಡಿಟ್ ಅಬ್ಜಕ್ಷನ್ ಸುದ್ದಿಯೇ ಇಲ್ಲ. ಕಾರಣವಾಗಿ ಸಾಮಾನ್ಯ ಮನುಷ್ಯರಂತೆಯೇ ನಾನು ಹೇಳಿದ ಹಾಗೆ ಕೇಳಿಕೊಂಡು ಇರುತ್ತಾರೆ. ಹೊರಗೆ ಹೇಗಾದರೂ ಮಾಡಿಕೊಳ್ಳಲಿ. ನಿನ್ನ ಹಾರೈಕೆಯಿಂದ ನಮ್ಮ ಮನೆಯಲ್ಲಿ ಹೀಗೆ ಇದ್ದರೆ ಸಾಕು!

ನೀವೆಲ್ಲಾ ಚೆನ್ನಾಗಿದ್ದೀರಿ ತಾನೆ! ಭಾವ ಸುಖವಾಗಿದ್ದಾರೆಯೇ ಎಂದು ಕೇಳು ಎಂದು ಇವರು ಹೇಳಿದರು.

ನಿನ್ನ ಸೌಭಾಗ್ಯಿನಿ,
**ಕಮ್ಮು.**

"ಆಡಿಟರ್ ಕಾಗದ"

"ಪ್ರಿಯ ಮಿತ್ರಾ! ನಿನ್ನೆ ನಿನ್ನ ಹೆಂಡತಿ ಬರೆದ ಕಾಗದವನ್ನು ಕಮಲು ನನಗೆ ತೋರಿಸಿದಳು. ಅದಕ್ಕೆ ನಾನು ಮಾಡಿದ ಸಾಧಿಸಿದ ಒಂದು ಮಹತ್ತರವಾದ ನಿದರ್ಶನವನ್ನೂ ಕೊಟ್ಟು ಅದೆಲ್ಲಾ ನ್ಯಾಯ ಎಂದು ಹೇಳಿದೆ. ಅದನ್ನೆಲ್ಲಾ ಲಲ್ಲು ಪ್ರತ್ಯುತ್ತರದಲ್ಲಿ ಬರೆದಿದ್ದಾಳೆ ಎಂಬುದು ಗೊತ್ತು.

ನಿನ್ನ ಮನಸ್ಸಿನಲ್ಲಿ ಕಾಲೇಜಿನಲ್ಲಿ ನಿನ್ನೊಡನೆ ಸಾಹಿತ್ಯ ಓದಿದ ನಾನೂ ಏಕೆ ಹೀಗಾದೆ ಎಂದು ಅನ್ನಿಸಿರಬಹುದು. ಕಾರಣ ಇಷ್ಟೇ! ಮನೆಯಲ್ಲಿ ನನಗೆ ಅತ್ತೆ ಕಾಟ ಅಸಾಧ್ಯ! ಆಕೆ ನಾನು ಉಪಯೋಗಿಸುವ ಹಲ್ಲುಪುಡಿ ಲೆಕ್ಕದಿಂದ, ಕೊಟ್ಟ ಬನಿಯನ್ ಮೌಲ್ಯಕ್ಕೂ, ಉಟ್ಟ ಪಂಚೆ ಬೆಲೆಗೂ ಹಾಕಿಕೊಂಡ ಎಲಡಿಕೆಗೆ ಕೂಡ ಆಡಿಟ್ ಅಬ್ಜಕ್ಷನ್ ತರುತ್ತಾಳೆ. ಈ ಅತ್ತೆ ಕಾಟಕ್ಕೆ ಮನೆಯಲ್ಲಿ ಸಮಾಧಾನ ಮಾಡಲು ನನಗೆ ಸಾಧ್ಯವಾಗಿಲ್ಲ. ಆ ಕಹಿಯನ್ನೆಲ್ಲಾ ಆಫೀಸಿನಲ್ಲಿ ಬಂದವರ ಕಾಗದದ ಮೇಲೆ ಕಾರುತ್ತೇನೆ, ಕಾನೂನುಪ್ರಕಾರ! ನಿನಗೆ ಅತ್ತೆ ಇಲ್ಲದ ಪುಣ್ಯ! ನಿನಗೆ ನನ್ನಂತಹ ನತದೃಷ್ಟ ಅಳಿಯಂದಿರ ಪಾಡು ಹೇಗೆ ತಿಳಿಯಲು ಸಾಧ್ಯ! ಈಗ ಲಾದರೂ ಅರಿತು, ಆಡಿಟರುಗಳ ಮೇಲೆ ವಿಷಕಾರಬೇಡ. ಅವರು ನೊಂದ ಜೀವಿಗಳು. ಆಡಲು ಆಗದೆ, ಅನುಭವಿಸಲೂ ಆಗದೆ ತೊಳಲುತ್ತಿರುವವರು. ಸಾಮಾನ್ಯ ಮನುಷ್ಯರಂತೆ ಅವರನ್ನು ಕಾಣಬೇಡ.

ನೀನು ನನ್ನ ವಿಷಯ ಸರಿಯಾಗಿ ತಿಳಿಯಲಿ ಎಂದೇ ಈ ಕಾಗದ ಬರೆದಿದ್ದೇನೆ. ನನ್ನ ಹಿತಾಭಿಲಾಷಿ ನೀನಾಗಿದ್ದರೆ, ಈ ಕಾಗದವನ್ನು ನೀನು ಓದಿದ ಕೂಡಲೆ ಸಿಗರೇಟಿನ ಜತೆಗೆ ಬೆಂಕಿಗೆ ಹಾಕು ನಿನ್ನ ಹೆಂಡತಿ ಇದನ್ನು ಓದಿದರೆ, ಕಹಳೆ ಬಾಯಿಗೆ ಮುತ್ತು ಕೊಟ್ಟಂತೆ! ಅಂದರೆ ನಾನು ಕೆರೆ ಭಾವಿ ಹುಡುಕಬೇಕಾಗುತ್ತೆ.

ನೀನು ಸುಖವಾಗಿದ್ದೀ ಎಂದು ನನಗೆ ಖಾತರಿ.

ನಿನ್ನ ಪೂರ್ವ ಕಾಲೇಜ್ ಗೆಳೆಯ,
ಆಡಿಟರ್.

# ವಿಜಿಗೀಷು

---

ಅಣೋರಣೀಯನ ಮಹತೋ ಮಹೀಮನಾದ ಜಲಜನಕಬಾಂಬು, ಅದು ಸಿಡಿದ ಜಾಗದ ಸುತ್ತ ೪೦೦ ಮೈಲಿಗಳಷ್ಟು ಪ್ರದೇಶವನ್ನು ಮಾತ್ರ ಧ್ವಂಸ ಮಾಡ ಬಲ್ಲದು; ಅಂದರೆ, ಭೂಲೋಕವನ್ನು ನಾಶಮಾಡುವುದು ನಾವು ತಿಳಿದದ್ದಕ್ಕಿಂತ ಕಷ್ಟತರ–ಎಂದು ಮೊನ್ನೆ ಒಬ್ಬರು ವಿಜ್ಞಾನಿಗಳು ಬರೆದಿದಾರೆ ಅಮೇರಿಕಾ ರಷ್ಯಾ ಈ ಎರಡು ರಾಷ್ಟ್ರಗಳು ಒಟ್ಟು ಸೇರಿದರೂ, ಲೋಕವನ್ನು ನಾಶಮಾಡಲು ಅವರು ಸುಮಾರು ೨೦ ವರ್ಷಗಳ ಕಾಲ ಅವಿಚ್ಛಿನ್ನವಾಗಿ ಪ್ರಯತ್ನ ಪಡಬೇಕಾಗುತ್ತದೆ, ಎಂದು ಆ ವಿಜ್ಞಾನಿ ಹೇಳಿರುವುದನ್ನು ಓದಿದರೆ, ನಮಗೆಲ್ಲರಿಗೂ, ವಿಶೇಷತಹಃ ವಿಜ್ಞಾನ ಶಾಸ್ತ್ರದ ವಿದಗ್ಧರಿಗೂ ವಿದ್ಯಾರ್ಥಿಗಳಿಗೂ, ನಿರಾಶೆಯಾಗದಿರಲಾರದು.

ಆದರೆ, ನಾನೂ ಒಬ್ಬ ವಿಜ್ಞಾನಿ; ಸೆಂಟ್ರಲ್ ಕಾಲೇಜ್ ವಿದ್ಯಾರ್ಥಿ; ನನ್ನ ಗುರುಗಳು ದೊಡ್ಡ ವಿಜ್ಞಾನಶಾಸ್ತ್ರವೇತ್ತರು. ಆದ್ದರಿಂದ, ನನಗನಿಸುತ್ತದೆ, ಈ ನಿರಾಶೆಗೆ ಕಾರಣವಿಲ್ಲವೆಂದು.

ಮಾನವ ಸಮಾಜವನ್ನು ನಾಶಮಾಡುವ ಉದ್ಯಮದಲ್ಲಿ ಎಲ್ಲ ರಾಷ್ಟ್ರಗಳೂ ನೆರವಾದರೆ, ಒಟ್ಟು ಏಕೋಪಿಸಿ ಕಾರ್ಯಕ್ರಮ ಜರುಗಿಸಿ, ಬಹು ಬೇಗ ಆ ಪುಣ್ಯ ಕೆಲಸವನ್ನು ಸಾಂಗವಾಗಿ ಪೂರ್ಣಗೊಳಿಸಬೇಕೆಂಬುದು ನನ್ನ ಅಭಿಪ್ರಾಯ.

ಒಬ್ಬರು ಬಾಂಬು ಹಾಕಿದಕಡೆ ಮತ್ತೊಬ್ಬರು ಹಾಕದೆ, ಭೂ ಮಂಡಲವನ್ನು ತಮ್ಮ ತಮ್ಮ ಕ್ಷೇತ್ರಗಳನ್ನಾಗಿ ವಿಂಗಡಿಸಿಕೊಂಡು, ಎಲ್ಲ ತರಹದ ವಿಮಾನಗಳನ್ನೂ ಅದಕ್ಕಾಗಿ ಉಪಯೋಗಿಸಿದರೆ, ೨೦ ವರ್ಷದ ಅವಧಿಯನ್ನು ೧೯ ವರ್ಷಕ್ಕೆ ಇಳಿಸ ಬಹುದೆಂದು ನನಗೆ ತೋರುತ್ತದೆ.

ಅಲ್ಲದೆ, ಹಾಳೂರುಗಳ ಅಸ್ಥಿಪಂಜರಗಳನ್ನು ಹೊಟ್ಟೆಯೊಳಗಿರಿಸಿ ಕೊಂಡಿರುವ ಮರಳುಗಾಡುಗಳ ಮೇಲೆ ಏಕೆ ಬಾಂಬು ಸುರಿಯಬೇಕು? ತಿಮಿ ತಿಮಿಂಗಲಾದಿಗಳ ಆವಾಸ ಸ್ಥಾನವಾದ ಸಾಗರ ಮಧ್ಯಕ್ಕೇಕೆ ಬಾಂಬು? ಉತ್ತರ ದಕ್ಷಿಣ ಧ್ರುವಗಳ ಗೋಜು ನಮಗೇಕೆ? ಮಾನವನ ವಾಸಕ್ಕೆ ಯೋಗ್ಯವಲ್ಲದ ಪ್ರವೇಶಗಳ ತಂಟೆಗೆ ನಾವು ಹೋಗಬೇಕಾದ್ದೇ ಇಲ್ಲ.

ಆಮೇಲೆ, ಆಗಲೇ ಅನೇಕ ರಾಷ್ಟ್ರಗಳು ಹಾಳಾಗಿ ಗಸ್ತ್ರವ್ಯಸ್ತವಾಗಿ ಯಾದವೀ ಕಲಹದಿಂದ ಗೆದ್ದಲು ತಿಂದ ಒಣ ಮರಗಳಂತೆ ಇಂದೋ ನಾಳೆಯೋ ಬೀಳುವಂತಿವೆ. ಅಲ್ಲಿ, ಬಾಂಬು ಹಾಕುವ ಮೊದಲು, ಜಾತಿಯ ಜಗಳವನ್ನು ಪ್ರೋತ್ಸಾಹಿಸಿದರೆ ಸಾಕು, ಅಲ್ಲಿಯ ಜನ ಒಬ್ಬರ ಕುತ್ತಿಗೆಯನ್ನು ಒಬ್ಬರು ಕುಯ್ದು, ತಮ್ಮ ದೇಶವನ್ನು ನಾಶಮಾಡುತ್ತಾರೆ. ಅಲ್ಲೆಲ್ಲ ಬಾಂಬುಗಳನ್ನೇಕೆ ಹಾಕಬೇಕು?

ಸಮುದ್ರದ ಮೇಲೆ ಬಾಂಬುಗಳನ್ನು ಹಾಕಿದರೆ, ಹೊಸ ದ್ವೀಪಗಳೆದ್ದು, ನಮ್ಮ ಕೆಲಸಕ್ಕೆ ಅಡಚಣೆ ತಂದೀತು; ಸುಮ್ಮನೆ ಬೂದಿ ಚೆಲ್ಲುತ್ತಾಹೋದರೆ, ಸಾಕು, ಬೆಸ್ತರು ನಿರ್ನಾಮ; ಶಕ್ತಿ ಚೆಲ್ಲುತ್ತಾಹೋದರೆ ಸಾಕು, ಮೀನುಗಳೆಲ್ಲ ವಿಷಕನ್ಯೆಯರಾಗುತ್ತವೆ.

ಅಂತು, ಲೋಕನಾಶದ ಕೆಲಸದಲ್ಲಿ ಅಮೆರಿಕಾ ರಷ್ಯ ಒಟ್ಟಾಗಿ ಸಹಕರಿಸಿ, ಮಾನವ ಸಮೂಹವನ್ನೂ ಮಾನವನ ವಾಸಕ್ಕೆ ಯೋಗ್ಯವಾದ ಎಲ್ಲ ಪ್ರದೇಶಗಳನ್ನೂ ಹಾಳುಮಾಡಿದ ಮೇಲೆ, ಕಟ್ಟ ಕಡೆಯದಾಗಿ, ಅವರಿಬ್ಬರ ವಿಮಾನದಳಕ್ಕೆ, ಒಂದು ಕೆಲಸ ಉಳಿಯುತ್ತದೆ. ಅದು, ತಮ್ಮ ಜಂಟಿ ಏರೋಡ್ರೋಮನ್ನು ಹೇಗೆ ನಾಶಮಾಡುವುದು, ಎಂದು.

ಆದರೂ, ಅದನ್ನು ಮಾಡಲೇಬೇಕು. ಮಾಡಿ, ಎರಡು ವಿಮಾನದಳಗಳೂ ಚಂದ್ರಲೋಕದ ಕಡೆಗೋ ಕುಜನ ಕಡೆಗೋ ಬಿರುಬಿರನೆ ತೆರಳಬೇಕು—ಅಲ್ಲಿ ತಮ್ಮ ಕೆಲಸವನ್ನು ಮುಂದುವರಿಸುವ ಆಸೆಯಿಂದ. ವಿಜಿಗೀಷುಗಳು ಮಾಡಿದರೂ ವೀರಸ್ವರ್ಗ ಸಿದ್ಧ.

—ಶಾಟೂಳಿ.



# ಜ್ಞಾನ ಸಂಪಾದನೆ

ಲೇಖಕ: ಅ. ರಾ. ಸೆ.

—— o ——

ನಾನೊಬ್ಬ ನರಗುರಿ ಅರ್ಥಾತ್ ಅನ್ ಎಂಪ್ಲಾಯ್ಡ್ ಗ್ರ್ಯಾಜುಯೇಟ್. ಜಿಯಾಸರ್ಪಾದಿಯ ಇತ್ತೀಚಿನ ಚಿತ್ರ; ದಿಲೀಪ್, ಮೀನಾಕುಮಾರಿ ಅಭಿನಯಿಸಿರುವುದು; ಅದೇ ನನ್ನ ವಿಳಾಸ, ತಿಂಗಳಲ್ಲಿ ೩೨ ದಿವಸ. ನಾನು ಎಂಪ್ಲಾಯ್‌ಮೆಂಟ್ ಎಕ್ಸ್‌ಛೇಂಜಿನ ಗೌರವ ಸದಸ್ಯನಾಗಿ ನಾಲ್ಕಾರುವರ್ಷ ಸಂದಿವೆ; ೧೯೬೦ನೇ ಇಸವಿಯ ವರೆಗೂ ಈ ಪದವಿ ನನ್ನದಾಗಿ ಉಳಿಯುವುದೆಂದು ನನ್ನ ದೃಢವಾದ ನಂಬಿಕೆ.

ಮೊನ್ನೆ ಮಾತಿಗೆ ಮಾತು ಬಂದಾಗ ನಮ್ಮ ಸುಬ್ಬಣ್ಣ 'ಏಕೆ ಹೀಗೆ ಅಲೆದಾಡುತ್ತೀಯೋ; ನನ್ನ ಲೆಕ್ಕ ಬರೆದುಕೊಡು ಕೈ ಖರ್ಚಿಗೆ ದುಡ್ಡು ಕೊಡುತ್ತೇನೆ' ಎಂದ. 'ಲೆಕ್ಕ' ಎಂದ ಕೂಡಲೇ ನನ್ನ ಜಂಘಾಬಲವೇ ಉಡುಗಿಹೋಯಿತು ಅದರ ದೆಸೆಯಿಂದಲೇ March-September-March ಎಂಬ ಕಾಲಚಕ್ರದ ಉರುಳಿನಲ್ಲಿ ಸಿಕ್ಕಿ, ನಾನು, ನನ್ನ ಜೀವನತಾರುಣ್ಯದ ಬಹುಭಾಗವನ್ನು ಕಳೆದಿದ್ದೇನೆ. ನಾನು ಸಾಧ್ಯವಿಲ್ಲವೆಂದರೆ ಅವನು ಕೇಳದೆ 'ಗುಗ್ಗು, ಶಾನುಭೋಗರ ವಂಶವೇ ನಿಮ್ಮದು. ಅದರ ಉಪ್ಪಿನಿಂದ ನಿನ್ನ ಮೂಳೆಗಳೆಲ್ಲಾ ಭದ್ರಗೊಂಡಿವೆ. ನಿನಗೆರಡೂವರೆ ಅಕ್ಷರದ ಡಿಗ್ರಿ ಬಂದಮಾತ್ರಕ್ಕೆ ಹಿಂಜರಿಯುವುದೇ. ಜ್ಞಾನ, ಸಂಪಾದನೆ ಮಾಡದೆ ಬರುವುದಿಲ್ಲ. ನಾಳೆ ಒಂದು ಪಕ್ಷ ನೀನು ಇಂಡಿಯಾದ U N.O. ಪ್ರತಿನಿಧಿಯಾದರೆ (ಅಲ್ಲಿಯವರೆಗೂ ಅದು ಇದ್ದರೆ) ಅಲ್ಲಿ ಎಂತಹ ಸುಳ್ಳರ ಬಾಯನ್ನೂ ಮುಚ್ಚಿಸುವ ತಾಖತ್ತು ಇದರಿಂದ ಬರುತ್ತದೆ' ಎಂದ. ನಾನು ಆಗಲಿ ಎಂದೆ–ಅವನಿಂದ ನಾಲ್ಕೆಂಟು ಕಾಫಿ ಕುಡಿದಮೇಲೆ.

ಈಗ ನಾನು ಸುಬ್ಬಣ್ಣನಿಗೆ, ಪೀಟರ್ ಕ್ರಿಸ್ತನಿಗೆ, ಆನಂದ ಬುದ್ಧನಿಗೆ, ನೆಹರೂ ಗಾಂಧಿಗೆ, ಇದ್ದಹಾಗೆ.

ಸುಬ್ಬಣ್ಣ ದಫ್ತರವನ್ನು ನನ್ನ ಬಾಬ್ತಿಗೆ ಕೊಟ್ಟು ಒಂದು ಉದ್ಘಾಟನಾ ಭಾಷಣವನ್ನು ಕೊಟ್ಟು "ಕುಮಾರವ್ಯಾಸ ಹೇಳಿದ್ದಾನಲ್ಲಾ 'ಬರೆದ ಬಳಿಕದು ವಿಧಿಯ ಸೀಮೆಯ ಬರಹ' ಎಂದು ಅದು ಶಾನುಭೋಗರ ವಿಷಯದಲ್ಲಿ ಹದಿನಾರು ಆಣೆ ಸತ್ಯ. ಇದು ಟ್ರೇಡ್ ಸೀಕ್ರೆಟ್. ನಮ್ಮ ಖಾತೆಯಲ್ಲಿ 'ದ್ಯಾಮವ್ವ ಕೋಂಮಲಪ್ಪ 15ಎ-

30ಗುಂ ಖುಷ್ಕಿ, ಆಕಾರ 4–3–0' ಎಂದು ಇತ್ತು ಎನ್ನು; ಅದನ್ನು 'ಭೀಮುವ ಕೊ ಕೊಲ್ಲಪ್ಪ 15ಎ-30ಗುಂ ಖುಷ್ಕಿ ಆಕಾರ 4–5–0' ಎಂದು ಬರೆದರೆ ಅದರ ಪತ್ತೆ ಆ ವಿಧಿಗೂ ಚಿತ್ರಗುಪ್ತನಿಗೂ ತಿಳಿಯಲಾರದು. ಯಾರಾದರೂ ಅದನ್ನು ಗಮನಿಸಿ ಪ್ರಶ್ನಿಸಿದರೆ ಹಾತ್‌ಚೂಕು ಎಂದೋ ನದರುಚೂಕು ಎಂದೋ ಹೇಳಿ ತಿದ್ದುತ್ತೇನೆ ಎಂದರಾಯಿತು. ಇದೋ ಈ ನಮೂನಾ ನಂಬರು 3 ಅಥವಾ ಪಹಣಿ ಇದೆಯಲ್ಲಾ ಇದರಲ್ಲಿ ಹೊಲಗಳ ಫಸಲು ಬರೆಯಬೇಕು. ಹೊಲದಮೇಲೆ ಹೋಗಿಯೇ ಬರೆಯಬೇಕು. 50ನೇ ಸರ್ವೆ ನಂಬರಿನಲ್ಲಿ ಜೋಳ, ತೊಗರಿ, ನವಣೆ, ಹುಚ್ಚೆಳ್ಳು ಬಿತ್ತಿದ್ದರು ಎಂದಿಟ್ಟುಕೋ. 'ನಾನು ಹಳ್ಳಿಗೆ ಹೋಗಿ ಗುಡಿಯಲ್ಲಿ ಕುಳಿತು ಗಸಗಸೆ ಪಾಯಸ ಮಾಡಿ ಕುಡಿದು, ಬಿಸಿಬೇಳೆ ಹುಳಿಯನ್ನ ಮಾಡಿ ಹೊಡೆದು ೫ಂನೇ ಸರ್ವೆ ನಂಬರಿನಲ್ಲಿ ರಾಗಿ, ಹುರುಳಿ, ಸಾಸಿವೆ, ಎಳ್ಳು ಎಂದು ಬರೆದರೆ ಬೇಡ ಎನ್ನುವವರು ಯಾರು? ಅಮುಲ್ದಾರರು ಜಮಾಬಂದಿಗೆ ಬಂದಾಗ ನಾನು ಮೇಲೆ ಹೇಳಿದ ಹೊಲವನ್ನೇ ಹೊಕ್ಕು ತನಿಖೆ ಮಾಡಿದರು ಎನ್ನು. 'ಏನೋ ಇದು' ಎಂದರೆ, ನಾನು ಸ್ವಾಮಿ ಇದು ೧ನೇ ನಂಬರು ಎಂದು ಬಿಡುವುದು. ಅವರಿಗೆ ಅಲ್ಲ ಎನ್ನುವ ಧೈರ್ಯ ಇರುವುದಿಲ್ಲ. ತಳದತಾಯಿ ಎದುರುಬಿದ್ದರೆ ಜಮಾಬಂದಿ ಕ್ಯಾಂಪು ಅಷ್ಟು ಕಳೆಗಟ್ಟಲಾರದು, ಅಲ್ಲಿಗೆ ಇಸ್ಪೀಟು ಪ್ಯಾಕ್ ಪ್ರವೇಶಿಸುವುದಿಲ್ಲ ಎಂಬ ಹೆದರಿಕೆ ಅವರಿಗೆ. ಅವರು ಸ್ಟ್ರಿಕ್ಟಾಗಿ ಜೋರುಮಾಡಿದರೂ ಸಹ 'ಸ್ವಾಮಿ ಈ ತಾಪೇದಾರಿ ನನಗೆ ಬೇಡ. ಮಹಾಪ್ರಭು ನನ್ನನ್ನು ದಫ್ತರದಿಂದ ಮುಕ್ತನನ್ನಾಗಿ ಮಾಡಿ' ಎಂದರೆ ಅವರು 'ಮಹರಾಯ, ನಿನ್ನ ಲೆಕ್ಕ ನಿನಗೊಬ್ಬನಿಗಲ್ಲದೆ ಯಾವ ಪಿಶಾಚಿಗೆ ಅರ್ಥವಾದೀತು. ನೀನೇ ಬಿಜಾಪುರ; ನೀನೇ ಬೋಳು ಗುಮಟ ಕಟ್ಟಿದವನು' ಎಂದು ಶರಣಾಗತರಾಗುತ್ತಾರೆ. ಅದೂ ಅಲ್ಲದೆ ಅವರು ಕೊಡುವ ಪೋಟಿಗೆ ಯಾವ ವಿಧವಾಪುತ್ರನಿಗೆ ಸಾಕು? ಅಯ್ಯೋ ನನ್ನ ಆಳೇ! ಎಂದರೆ ಅಯ್ಯೋ ನನ್ನ ಸಂಬಳವೇ! ಎಂದ ಕತೆ ನಿನಗೆ ತಿಳಿಯದೇ"

ಈಗ ನಾನು ಲೆಕ್ಕ ಬರೆಯುತ್ತಿದ್ದೇನೆ. ಅಕ್ಷ ಬರೆದು ಮುಗಿಸಿದ್ದೇನೆ. ಪಹಣಿ ಬರೆಯುತ್ತಾ ವಿಷಸಮುದ್ರದ ಮಲ್ಲಪ್ಪ ಕೋಂ ಈರವ್ವ ಎಂದು ಬರೆದಿದ್ದೆ. ಕೋಂ ಎಂದರೆ ಗಂಡ ಸರಿಯಾದ ಲೆಕ್ಕ ಈರವ್ವ ಕೋಂ ಮಲ್ಲಪ್ಪ ಎಂದಿರಬೇಕಾಗಿತ್ತು. ತಪ್ಪು ಬರೆದಮೇಲೆ ತಿದ್ದಬೇಕಾಗಿತ್ತು. ತಿದ್ದುವವರು ಯಾರು? ನಾನಂತೂ ಅಲ್ಲ ಸುಬ್ಬಣ್ಣ ಮೇಲಿನ ಲಿಖಿತವನ್ನು ನೋಡಿ, 'ಏನಿದು? ನಿನ್ನಜ್ಜಿಯ ಪಿಂಡ' ಎಂದ. ನಾನು 'ಹಾತ್‌ಚೂಕು' ಎಂದೆ. ಅವನು 'ಶಹಭಾಸ್' ಎಂದ. ಶಿವಾಜಿ ಶಹಭಾಸ್ ಎಂದಾಗ ನೇತಾಜಿಗೂ ಅಂದು ನನಗೆ ಆದಷ್ಟು ಆನಂದವಾಗಿರಲಾರದು ನಾನು ಬಾಲ ಬಿಚ್ಚಿದೆ. ಖರಾಬ್‌ಗೋ ಮಾಳ ಎಂಬುವುದಕ್ಕೆ ಖರಾಬು ಗೋ ಮೂಳ್ಳೆ ಎಂದು ಬರೆದೆ. ನಮ್ಮೂರಿನ ಜನಸಂಘ ಪ್ರತಿನಿಧಿ ಅದನ್ನು ನೋಡಿದ್ದಿದ್ದರೆ ನಾಸಿಷ್ಟು ಹೊತ್ತಿಗೆ ಹರಹರ, ಹುಲ್ಲು ಬನ್ನಿ ಎಂಬುವುದಕ್ಕೆ 'ಹಲ್ಲು; ಬನ್ನಿ' ಎಂದು ಬರೆದೆ.

ಚನ್ನಬಸಪ್ಪ ಎಂಬುವುದಕ್ಕೆ ಚೊನ್ನಬಸ್ಪ ಎಂದು ಬರೆದೆ. ಆನಂದ ವಾರಿಧಿಯ ಪಾನ ಮಾಡಿದೆ. ತಾಂಡವ ಶಿವನಾದೆ.

ಆದರೆ ನಾನಿನ್ನೂ ಕಾಣಲಿರುವ ಸೊಗಸು ಬಹಳವಿತ್ತು. ಖಾನೇಷುಮಾರಿ ಎಂಬ ೧೨ನೆಯ ನ. ನಂ. ಪುಸ್ತಕ ತೆಗೆದೆ. ಅದು ಊರಿನ ಜನ್ನ, ದನ, ನರ, ಕುರಿ, ಎತ್ತು, ಕತ್ತೆ, ಗೃಧ್ರ ವಾಯಸಗಳ ಎಣಿಕೆಮಾಡುವ ಲೆಕ್ಕ. ಅದರ ಗುಟ್ಟು ಶಾನು ಭೋಗಿಕೆ ಬರೆದವನೇ ಬಲ್ಲ. 'ಖಾನೇಷುಮಾರೀ ಬಹುದುಃಖಕಾರೀ' ಎಂದು ಕೌಟಿಲ್ಯದ ಅರ್ಥಶಾಸ್ತ್ರ ಓದಿದವರೆಲ್ಲಾ ಬಲ್ಲರು. ಆದರೆ ಈ ಪ್ರಗತಿಶೀಲ ಯುಗದಲ್ಲಿ ಕೋಬಾಲ್ಟ್ ಬಾಂಬ್ ಕಾಲದಲ್ಲಿ ಹಾಗಲ್ಲ. 'ಖಾನೇಷುಮಾರೀ ಬಹುಸೌಖ್ಯಕಾರೀ'.

ಇನ್ನು ಆ ರಸ ಸಮುದ್ರಕ್ಕೆ ಪ್ರಯಾಣ ಮಾಡೋಣ. ಇದು ಅದರ ಒಂದು ಎಕ್ಸ್‌ಟ್ರ್ಯಾಕ್ಟ್. ಶಿಶುಸಂಪತ್ತು, ಪಶುಸಂಪತ್ತು ಯಾವುದೂ ಬೇಡ. ಅದರಲ್ಲಿ ಊರಿನ ಮನೆ, ಪಾಳುಗಳು ಯಾರಿಗೆ ಸೇರಿವೆ ಎಂಬುದನ್ನು ಮಾತ್ರ ತೆಗೆದು ಕೊಳ್ಳೋಣ.

Extract:—

| ಜಂ. ನ. | ಹೆಸರು |
|---|---|
| (1) | ಪಾಲವ್ವನ ಮಗಳು ಗೂಲವ್ವ |
| (2) | ಮೂಕಪಾಲನ ತಮ್ಮ |
| (3) | ನಂಜುಂಡರಾವ್ ಮನೇಲಿ ಹುಸೇನ್ ಬೀ |
| (4) | —ಡಿ— ಮನೆ ಇ, ಸಣ್ಣವೀರಪ್ಪ ಇ. ದೊಡ್ಡವೀರಪ್ಪ ದನಕಟ್ಟುತ್ತಾನೆ. |
| (5) | ಕಲ್ಲಳ್ಳಿ ಬೋರಿ, ಇ. ಕಂಟಿಮಲ್ಲ. ಇ. ಸೂಳೆ ಸೊಂಚಲಚ್ಚಿ ಸೊಟ್ಟೆ ಬೋರಪ್ಪನ ಅನುಭವ |
| (6) | ಬೋಸಪ್ಪ ಖಾಲೀ, ಘಟ್ಟಪ್ಪ ಖಾಲೀ, ಕರೇಗೌಡ ಖಾಲೀ, ಪಾಳು. 5ಕ್ಕೆ ಲಗ್ತು |
| (7) | ಕುಂಬಾರ ಈರಪ್ಪನ ಹಿತ್ತಲು, ಹಜಾಂ ಬಸ್ವನ ಬಾಬ್ತು, ಅಗ್ಸರ ತಿಮ್ಮಪ್ಪನ ಅನುಭವ ಪೈಕಿ ಆ\|ಕ\| ರಂಗವ್ವ ಅಲ್ಲ ಜೋಯ್ಸರ ವೆಂಕಣ್ಣ. |

ಇದೇನು ಎಂದು ಮೂಗು ಮುರಿಯದೆ ಜಿಜ್ಞಾಸೆ ಮಾಡೋಣ.

(1) ಜಂ. ನಂ. ಎಂದರೆ ಮೊದಲನೇ ಜಂಜರು ನಂಬರಿನ ಅಧಿದೇವತೆ ಪಾಲವ್ವ ಅವಳು ತನ್ನ ಸುಪುತ್ರಿಗೆ ಗೂಲವ್ವ ಎಂದು ಹೆಸರಿಟ್ಟರೆ ನಾವೇಕೆ ಬೇಡವೆನ್ನುವುದು. ಈಗ ಎರಡನೆ ನಂಬರು ಮತ್ತು ಅದರ ಜಿಜ್ಞಾಸೆ. ದಯವಿಟ್ಟು ನೀವು ಮಾಡಲು ಹೋಗಿ ನಿರಾಶರಾಗದಿರಿ. ನಿಮ್ಮ ದಾಸ ಇದೇನೆ. ಅದು ಮೂಕಪಾಲನ ತಮ್ಮನಿಗೆ

ಸೇರಿದೆ ಎಂದು ಮೇಲಿನ ಬರಹ ತಿಳಿಸುತ್ತದೆ. ನಿಜ; ಆದರೆ ಮೂಕಪಾಲನು ಯಾರು? ಅವನ ತಮ್ಮನಿಗೆ ಹೆಸರೇ ಇಡಲಿಲ್ಲವೇ? ಎಂಬ ಸಂಶಯ ಬರುವುದು ಸಹಜ. ಅಗಸ್ತ್ಯ ಭ್ರಾತಾ ಇಲ್ಲವೇ ಹಾಗೆ, ಅಗಸ್ತ್ಯನೇ ಇಷ್ಟುದಿನ ಕೆರೆಬಾವಿಗಳ ನೀರುಕುಡಿದು ಬಿಜಾಪುರ, ರಾಯಲಸೀಮೆಗಳಲ್ಲಿ ಕ್ಷಾಮ ತಂದವನೆಂದು ಎಲ್ಲರಿಗೂ ತಿಳಿದಿದೆ. ಆದುದರಿಂದ ಅವನ ತಮ್ಮ ಯಾರಾದರೇನು? ಅವನಿಗೆ ಯಾವ ಹೆಸರಿದ್ದರೇನು? ಅವನು ಅಗಸ್ತ್ಯನ ತಮ್ಮ ಎಂದು ತಿಳಿದರಾಯಿತು.

ಸರಿ; ಆದರೆ ಮೂಕಪಾಲನು ಅಗಸ್ತ್ಯನಷ್ಟು ಪ್ರಸಿದ್ಧನಾಗುವ ಸಂಭವ ಎಳ್ಳಷ್ಟೂ ಇಲ್ಲ. ಒಂದು ಕೊಡ ನೀರು ಕುಡಿದರೆ ಸಾಕು ಅವನು ಹರಹರ. 'ಜೋಗಿನ ರೋಂರರಿನ ಸರಿಸದಲಿ ನಲ್ಲಿಯ ನೀರು ಸುರಿದಂತಲ್ತೆ ಕಂಪೇರ್ಗಯ್ಯಲಿಬ್ಬ ರನು' ಪುರುಷ ಸರಸ್ವತಿ ಹೇಳಿದಹಾಗೆ. ಹೀಗಾಗಿ ಒಂದು ಮಹತ್ತ್ವದ ಚಿಂತಾ ಪ್ರಸ್ಥಾನವಾಯಿತಲ್ಲವೇ. ಮೂಕಪಾಲನ ತಮ್ಮ! ಯಾರವನು? ದಿಲೀಪ್‌ಕುಮಾರೇ? ಬೋರಿಸ್ ಕಾರ್ಲಾಫೇ? ಮೈಸೂರು ಸಾಬುವೇ? ಎಸ್ತರ್ ವಿಲಿಯಮ್ಸೇ? (excuse me). ಅಲ್ಲ ಸ್ವಾಮಿ ಅಲ್ಲ. ಅವನ ಮಾತು ಒಂದು ಮೈಲಿ ದೂರಕ್ಕೆ ಕೇಳಿದರೂ ಅವನ ಹೆಸರು ಮೂಕ, ಪಾಲನ ತಮ್ಮ. ಪಂಕ್ಚುಯೇಷನ್ ಇಲ್ಲ ಖಾನೀಷುಮಾ ರೀಲಿ.

ಇನ್ನು ಮೂರನೆಯ ಜಂ. ನಂ. ಒಂದು ಪ್ರಗತಿಶೀಲ ಕಾದಂಬರಿ ಎಂದು ಧಾರಾಳವಾಗಿ ಹೇಳಬಹುದು. 'ನಗ್ನಸುಂದರಿ' 'ಪ್ರೇಮದಾಹ' ಮೊದಲಾದ ಬೃಹದ್ಗ್ರಂಥಗಳನ್ನೋದಿದ ವಾಚಕ ಮಹಾಶಯರಿಗೆ ನಂಜುಂಡರಾವ್ ಮನೆಯಲ್ಲಿ ಹುಸೇನ್ ಬೀ ಹೇಗೆ ಬಂದಳೆಂದು ನಾವು ವಿವರಿಸಲು ಹೋದರೆ ಅದು ನಮ್ಮ ಮೂರ್ಖತನವಾದೀತು.

ನಾಲ್ಕನೆಯದರಲ್ಲಿ ಅಷ್ಟೇನೂ ವಿಶೇಷವಿಲ್ಲ. ಅದರ ಯಜಮಾನನ ಹೆಸರು D. ಇ ಎಂದರೆ ಇದರಲ್ಲಿ ಸಣ್ಣವೀರಪ್ಪ ಇದ್ದ. ಅವನನ್ನು ದೊಡ್ಡವೀರಪ್ಪ ಓಡಿಸಿ ಅಲ್ಲಿ ದನ ಕಟ್ಟಿದ. ಆದರೆ ಒಂದು ಸಂಶಯ ನನಗೇ ಬಂತು. D ಎಂದರೆ 2-D ಯೋ 3-Dಯೋ ಎಂದು. D ಎಂದರೆ ಡಿಟ್ಟೋ. ಎಂದರೆ ಮೇಲಿನ ಖಾತೆ ನಂಜುಂಡರಾಯರು ತಾಪತ್ರಯ, ಮೋಹದ ಬಲೆಗೆ ಸಿಲುಕಿ ಮನೆ ಮಾರಿದರು ಎಂದು ಸುಬ್ಬಣ್ಣ ನನ್ನ ಸಂಶಯ ಛೇದ ಮಾಡಿದ. ವಿಧಿವಶದೆ ನಂಜುಂಡರಾವ್ ನಿನಗಮೀ ಪರಿಯಾಯ್ತೇ? ಎಂದು ಉಸಿರ್ಗರೆದೆ.

ಐದನೆ ನಂಬರು:- ಕಲ್ಲಳ್ಳಿಯ ಪ್ರೇಮಾಕಾಶದ ತಾರೆಯಾಗಿ ಬೆಳಗುತ್ತಿದ್ದ ಬೋರಿ ವಿಷಸಮುದ್ರಕ್ಕೆ ಬಂದಳು. ಅಲ್ಲಿ ಅವಳ ಪ್ರಿಯತಮನಾದವನು ಕುಂಟಮಲ್ಲ. 'ಪೊಲ್ಲಮೆಯೆ ಲೇಸು ನಲ್ಲರ ವೈಯ್ಯೋಳ್' said Good old ಜನ್ನ. ಬೋರಿ

ಹಾರಿಹೋದಳು. ಕುಂಟಮಲ್ಲ ಸೊಂಚಗೈ ಲಚ್ಚಿಯೊಡನೆ ಸಂಸಾರ ರಥ ಸಾಗಿಸಿದ. ಅವರ ವರಪುತ್ರ ಸೊಟ್ಟಬೋರ now Lord of No. 5ನೇ ಮನೇ. ನೂರಾರು ಪ್ರಗತಿಶೀಲ ಕಾದಂಬರಿ ನವ್ಯಕಾವ್ಯಗಳಿಗೆ ಸಾಮಗ್ರಿ.

6ನೇ ಜಂ. ನಂ. ಮನೆ ಕ್ಷುಧಿತ ಪಾಷಾಣ ನಿರ್ಮಿತವಾದುದಾಗಿತ್ತು. ಏಕೆಂದರೆ ಅಲ್ಲಿದ್ದ ಬೋಸಪ್ಪ ಘಟ್ಟಪ್ಪ, ಕರಿಗೌಡ ಎಲ್ಲರೂ ಖಾಲಿಯಾದರು ಈಗ 5ನೇ ಮನೆಗೆ ಲಗ್ತಾದ ಪಾಳು ಆಗಿದೆ; ವಿಜಯನಗರ ಸಾಮ್ರಾಜ್ಯದಂತೆ.

7ನೇ ಮನೆ ಕೋಮುವಾರು ವೈತ್ರಿಯನ್ನು ಬೋಧಿಸುವ ಹೆಗ್ಗಲ್ಲು. ಕುಂಬಾರ ಈರಪ್ಪ, ಹಜಾಮರ ಬಸವ, ಅಗಸರ ತಿಮ್ಮವ್ವ, ಆದಿಕರ್ನಾಟಕರ (ಕರ್ನಾಟಕವೂ ಹೌದು) ರಂಗವ್ವ ಅಲ್ಲ ಜೋಯ್ಸರ ವೆಂಕಂಣ ಇವರೆಲ್ಲರೂ ಇಲ್ಲಿ ಒಂದು ಬೃಂದಾವನವನ್ನೇ ನಿರ್ಮಿಸಿದ್ದಾರೆ. ಎಷ್ಟೋಬಾರಿ ಕೈ ಬದಲಾವಣೆ ಆದರೂ ಚಿಂತೆಯಿಲ್ಲ. ಇದರ ವ್ಯವಹಾರ ಹೇಳಲು ೩೦೦೦ ಪುಟದ ಕಾದಂಬರಿಯನ್ನೇ ಬರೆಯಬೇಕಾಗಿದೆ.

ಸುಬ್ಬಣ್ಣನ ಜಮಾಬಂದಿ ಮುಗಿಯಿತು. ಈಗ ನಾನು ಅನೇಕ ಪ್ರ. ಶೀ. ಕಾದಂಬರಿಗಳನ್ನೂ, ಮಹಾ ನವ್ಯ ಕಾವ್ಯಗಳನ್ನೂ, ಹೊಸದೊಂದು ಪೆರುಂಗತೈ ಅಥವಾ ಕಥಾಮೃತವನ್ನೂ ಬರೆಯಲು ಬಗೆದು ನಮ್ಮ ಜಿಲ್ಲೆಯ ಖಾನೇಷುಮಾರಿಗಳನ್ನೆಲ್ಲಾ ಅಭ್ಯಸಿಸುತ್ತಿದೇನೆ.

---




"…. …ನಾಕಿಡ್ಲೆ ವಡೆ ಅಲ್ಲಿ; ಖಾಲಿ ಕಾಫಿ ನಂಗೆ…."

# ಕೊನೆಗೊಮ್ಮೆ ತೇರ್ಗಡೆಯಾಗಲಿಲ್ಲ

o

ಮಿಡಲ್‌ಸ್ಕೂಲಿನಲ್ಲಿರುವಾಗಲೇ ಜೊತೆಯವರು ಪಾಂಡುರಂಗಿಗೆ 'ಪರೀಕ್ಷಾ ಪ್ರಿಯ' – ಎಂಬ ಹೆಸರಿಟ್ಟಿದ್ದರು. ಪರೀಕ್ಷೆಗಳೆಂದರೆ ಮೊದಲಿಂದಲೂ ಅವನಿಗೆ ಅಷ್ಟೊಂದು ಖುಶಿ. ಉಳಿದವರಿಗೆ ಕೊಂಚ ಛಳಿ ಛಳಿ. ಪಾಂಡುರಂಗಿ ಕ್ಲಾಸಿನಲ್ಲಿ ಆಗಾಗ ಚಿಲ್ಲರೆ ಟೆಸ್ಟ್‌ಗಳನ್ನು ನಡೆಸುವಂತೆ ಮೇಷ್ಟರುಗಳನ್ನು ಪ್ರೇರೇಪಿಸಿ ಸ್ಕೂಲಿನ ಹೊರಗೆ, ಬಲಿತ ಸೋಮಾರಿಗಳಿಂದ ಪಾದಪೂಜೆ ಮಾಡಿಸಿಕೊಳ್ಳುತ್ತಿದ್ದುದುಂಟು. ದಮ್ಮಯ್ಯ ಭಾವದಕಳೆ ಅವನ ಮೂತಿಯಲ್ಲದಿದ್ದರೆ ಅವನ ಜೀವ ಹೋಗುತ್ತಿತ್ತೋ ಏನೊ!

ಪಾಂಡುರಂಗಿ ವರ್ಷೆ ವರ್ಷೆ ಎಲ್ಲ ಪರೀಕ್ಷೆಗಳಲ್ಲಿಯೂ ಪಾಸಾಗಿ ಬೇಗ ಬೇಗನೆ ಮೆಟ್ಟಲೇರಿ ಜೊತೆಯವರಲ್ಲನೇಕರು ಇಂಟರಿನ ಕೆಳಗೆ ಕುಂಟುತ್ತಿರುವಾಗಲೇ ಆನರ್ಸ್ ತೆಗೆದುಕೊಂಡ. ಕಾಲೇಜಲ್ಲಿರುವಾಗ ರಿವಿರ್ಷ ಎಕ್ಸಾಮ್ ಇತ್ಯಾದಿಗಳನ್ನು ಬಿಟ್ಟರೆ ಬೇರೆ ಮಾತೇ ಇಲ್ಲ. ಅವನನ್ನು ಕಂಡರೆ ಗೌರವ ಒಂದುಕಡೆ; ಜಿಗುಪ್ಸೆ ಒಂದುಕಡೆ.

ಆಮೇಲಾದರೂ ಅವನ 'ಪರೀಕ್ಷಾಪ್ರಿಯತೆ' ಕೊನೆಗಂಡಿತೆ? ಇಲ್ಲ. ಯಾವ ಯಾವ ಯೂನಿವರ್ಸಿಟಿಗಳ ಯಾವ ಯಾವ ವಿಷಯಗಳಿಗೆ ಪ್ರೈವೇಟಾಗಿ ಪರೀಕ್ಷೆಗೆ ಕಟ್ಟಿ ಡಿಗ್ರಿ ಸಂಪಾದಿಸಬಹುದೆಂಬ ವಿವರ ತಿಳಿದುಕೊಂಡು ನೋಟ್ಸ್, ಗೈಡು, ಕ್ರಿಟಿಸಿಸಮ್ಸ್, ಕಮೆಂಟರಿಗಳನ್ನು ಕೂಡಹಾಕಿ ಅಹೋರಾತ್ರಿ ಓದಿಯೇ ಓದಿದ. ಪರೀಕ್ಷೆಗಳಿಗೆ ಕುಳಿತುಕೊಂಡ. ಪಾಸಾದ ಹಿಂದೀ ಮೊದಲಾದ ಭಾಷಾ ಪರೀಕ್ಷೆಗಳನ್ನೂ ಬಿಡಲಿಲ್ಲ. ಟಿಂಬಕ್ಟೂ ಯೂನಿವರ್ಸಿಟಿಯಲ್ಲಿ ಹಾಟೆಂಟಾಟರ ಭಾಷೆಯ ಪರೀಕ್ಷೆ ಇರುವುದು ಅವನಿಗೆ ತಿಳಿದಿರಲಿಲ್ಲವೋ ಏನೋ! ಅಂತೂ, ವಯಸ್ಸು ಇಪ್ಪತ್ತಾರೆನ್ನು ವಾಗ ಪಾಂಡುರಂಗಿಯ ಹೆಸರಿನ ಮುಂದೆ ಅವನು ಪಡೆದ ಡಿಗ್ರಿಗಳ ಇಪ್ಪತ್ತಾರಕ್ಷರಗಳು ರಾರಾಜಿಸುತ್ತಿದ್ದುವು.

ಉಂಡುಣುವುದಕ್ಕೆ ಕಡಿಮೆಯಿಲ್ಲ. ಆದರೆ ಉದ್ಯಮ ಬೇಡವೆ? ಉದ್ಯೋಗ ಬೇಡವೆ? ಉಹು. ಪಾಂಡುರಂಗಿಗೆ ಪರೀಕ್ಷೆಯದೊಂದೇ ಗೀಳು "ಒಮ್ಮೆ ಫೆಯಿಲ್ ಆದೆನೆಂದರೆ ಮತ್ತೆ ಪರೀಕ್ಷೆಗೆ ನಿಲ್ಲುವುದಿಲ್ಲ" - ಎನ್ನುತ್ತಿದ್ದ ಭೂಪ! ಅದು ಅಸಂಭವ ಎಂದುಕೊಂಡಿದ್ದೆವು, ನಾವೆಲ್ಲ.

ಆದರೆ ಹಾಗಾಗಲಿಲ್ಲ.

ಪಾಂಡುರಂಗಿಗೆ ಮದುವೆಯಾಯಿತು. ನಿವೃತ್ತ ಆಫೀಸರರ ಏಕಮಾತ್ರ ಪುತ್ರಿ ಅಪಾರ ಸಂಪತ್ತನ್ನೂ ತಂದಿದ್ದಳು. ಅವಳಲ್ಲಿ ಅಕ್ಕರೆಯೂ ಕಡಿಮೆಯಿಲ್ಲ, ಕೈಹಿಡಿ

ದವನನ್ನು ಅರಗಿಳಿಯಂತೆ ಸಾಕಬೇಕೆಂಬುದು ಅವಳ ಆಸೆ. ಆದರೆ ಅದೇ ಬಂದಿದ್ದು ಪಾಂಡುರಂಗಿಗೆ ಗೋಳು.

ಮೊನ್ನೆ ನಮ್ಮ ವೆಂಕಣ್ಣ ಅವರ ಮನೆಗೆ ಹೋಗಿದ್ದಾಗ ಪಾಂಡುರಂಗಿ ತನ್ನ ಅಲ್ಸೇಷಿಯನ್ ಜೊತೆಗೆ ಅಂಗಳದ ಕಲ್ಲುಬೆಂಚಿನಮೇಲೆ ಕುಳಿತಿದ್ದನಂತೆ. Mrs. ಪಾಂಡುರಂಗಿ ಕ್ಲಬ್ಬಿಗೆ ಹೋಗಿದ್ದರಂತೆ. ಕನ್ಯಾಪರೀಕ್ಷೆಯಲ್ಲಿ ತಾನು ಫೆಯಿಲಾದುದನ್ನೂ ತತ್ಪರಿಣಾಮವಾಗಿ ಒದಗಿದ ದಬ್ಬಾಳಿಕೆ ಸರಕಾರದ ಸಮಾಚಾರವನ್ನೂ ಪಾಂಡುರಂಗಿ ಬಾಲ್ಯದ ಸ್ನೇಹಿತನಿಗೆ ಕರುಳು ಕೊಯ್ಯುವಂತೆ ವಿವರಿಸಿದ ಮೇಲೆ "ಇನ್ನು ಯಾವ ಪರೀಕ್ಷೆಗೆ ನಿಲ್ಲುತ್ತೀಯ?"-ಎಂದು ಅವನನ್ನು ಕೇಳಲು ವೆಂಕಣ್ಣನಿಗೆ ಬಾಯಿಯೇ ಬರಲಿಲ್ಲವಂತೆ.

ಏಕೆಂದರೆ ಪಾಂಡುರಂಗಿ ಹೇಳುತ್ತಿರಲಿಲ್ಲವೇ? "ಒಮ್ಮೆ ಫೆಯಿಲಾದರೆ ಮತ್ತೆ...."

— ರಾಮಕೃಷ್ಣ.

---

# ಬೆಣ್ಣೆ

---

ಪೋಗದಿರೆಲೋ, ಜಾಣ, ಪಾರ್ಟಿಯಿಂದಾಚೆಗೆ
ಚಾಣಕ್ಯರು ಕಂಡರೆತ್ತಿ ಕೊಂಡೊಯ್ವರೊ ||
ದೊರಕದ ವೋಟು ದೊರಕೀತು ತಮಗೆಂದು
ಹರುಷದಿಂದಲಿ ಡೆಪ್ಟಿಮಿನಿಸ್ಟರ ಮಾಳ್ಪರೊ ||

ಅಗಣಿತಗುಣ ನೀನು ಕಮಿಟಿಗೆ ಬಾ ಎಂದು
ಹಗರಣ ಮಾಳ್ಪರು ಜೋಪಾನವೇ ||
ಬ್ರೂಟಲ್ ಮೆಜಾರಿಟಿ ಸುಲಭದಿ ಸಿಕ್ಕರೆ
ಮಿನಿಸ್ಟರ್‌ಗಿರಿ ಕೂಡ ಕೊಡಲೊಪ್ಪಿಕೊಂಬರೊ ||

ದುಷ್ಟ ಲೀಡರುಗಳು ತಮ್ಮಿಷ್ಟ ಸಲಿಸೆಂದು
ಅಟ್ಟಟ್ಟಿ ಬೆನ್ನತ್ತಿ ತಿರುಗುವರೊ ||
ಎದುರುಪಕ್ಷದ ಹಲವು ಜಾಣರನ ಸೆಳೆಯಲು
ಇಷ್ಟಿಷ್ಟು ಬೆಣ್ಣೆಯನು ತರುವರೊ, ಜೋಕೆ ||.

# ಅಜ್ಜಿಯ ಗ್ರಹಚಾರ!

---

ಎಂದಿನಂತೆ ಅಜ್ಜಿ ಬಚ್ಚಲಮನೆ ಒಲೆಯಿಂದ ಒಂದು ತಗಡಿನಲ್ಲಿ ಬೆಂಕಿ ತೋಡಿ ಕೊಂಡಳು. ಅದರ ತಲೆಯಮೇಲೆ ಒಂದಷ್ಟು ಚಿಕ್ಕೆಪುಡಿ ಬೆರಣಿಚೂರು ಹಾಕಿದಳು. 'ಇಲ್ನೋಡಿ, ಇಲ್ನೋಡಿ' ಅನ್ನುತ್ತಾ ಎಲ್ಲೋ ನೋಡುತ್ತಿದ್ದ ನಮ್ಮ ಗಮನವನ್ನು ಸೆಳೆದು, ನನಗೂ ಅಮ್ಮನಿಗೂ ನಡುವೆ ಹೋಗುವುದಕ್ಕೆ ಸ್ಥಳವಿದ್ದರೂ ಇಬ್ಬರ ನಡುವೆ ಹೋದರೆ ಜಗಳ ಬಂದೀತೆಂದು ಪಕ್ಕದಿಂದ ಸರಿದುಕೊಂಡುಹೋಗಿ ಅಡಿಗೆ ಮನೆ ಒಲೆಗೆ ಕೂಡ್ಲೆ ಬೆಂಕಿ ಸ್ಥಾಪಿಸಿದಳು. ಆಮೇಲೆ ಎರಡು ನಿಮಿಷದ ಸ್ನಾನ! 'ಸುಜ್ಯೋತಿಕೇತಿ ಕವೇರ ಜಯತಿ ಹೇಮಾವತೇತಿ ಕನಕೇತಿ... ಕಾವೇರಿ ಕಾವೇರಿ ಕಾವೇರಿ ಗಂಗಾ ಭಾಗೀರಥೀ' ಹೇಳಿಕೊಂಡು, ತಾನೇ ತಾಮ್ರದ ಬಿಂದಿಗೆಗೆ ಹುಳಿ ಹಚ್ಚಿ ಸೇದಿಟ್ಟುಕೊಂಡಿದ್ದ ನೀರನ್ನು ಆಮಸ್ತಕಪಾದ ದಡ ದಡ ಸುರಿದುಕೊಂಡಳು. ವಸ್ತ್ರದಿಂದ ಸುರಿಯುತ್ತಿದ್ದ ನೀರಿನ ಧಾರೆಯ ಸಮೇತ ನಡುಮನೆಯ ಗಳುವಿನಮೇಲೆ ಹರಡಿದ್ದ ಮಡಿಸೀರೆಯನ್ನು ಸೆಳೆದುಕೊಳ್ಳುವುದಕ್ಕೆ ಹೋದಳು. ನಾನು ಇನ್ನೂ ಒಲೆಯಮುಂದೆ 'ಒಲೆಯಮುಂದೆ ಎಲೆಯಮುಂದೆ....' ಅಂತಾರಲ್ಲ ಹಾಗೆ ಕೊಳ್ಳಿ ಗಳನ್ನು ಕೆದಕುತ್ತಾ ಕುಳಿತಿದ್ದೆ. ಅಡಿಗೆ ಮನೆಯ ಒಲೆಯಮೇಲೆ 'ಚೊಂಯ್' ಅನ್ನೋ ಹೊತ್ತಿಗೆ ನಮ್ಮ ಸ್ನಾನವಾದರೆ ಸಾಕಲ್ಲ!

ನಡುಮನೆಯಲ್ಲಿ ಮಡಿಕೋಲು ಉರುಳಿಬಿದ್ದ ಶಬ್ದವಾಯಿತು. ತಿರುಗಿ ನೋಡಿದೆ. "ಅಯ್ಯೋ, ಅಯ್ಯೋ....ೀ... ಪುಟ್ಟೊ... ಹೋಯ್ತಲ್ಲೋ! ಕೈಯಾರ ಕೊಂದುಬಿಟ್ನೆಲ್ಲೋ.... ಅಯ್ಯೋ ದೇವರೆ! ಬೆಳಗ್ಗೆ ಎದ್ದು ಯಾರ ಮುಖ ನೋಡಿದೆ ನಪ್ಪ! ಏನು ಗ್ರಹಚಾರ ಬಂತಪ್ಪ! ಹೀಗಾಗಬಹುದೆ...." ಎಂದು ತಲೆ ತಲೆ ಚಚ್ಚಿ ಕೊಳ್ಳುತ್ತಾ ಓಡಿಬಂದಳು. ನಾನು ದಿಗ್ಭ್ರಾಂತನಾಗಿ ಎದ್ದೆ. ಎದೆ ಡವ ಡವ ಹೊಡೆದುಕೊಳ್ಳುತ್ತಿತ್ತು. ಮಾತಾಡುವುದಕ್ಕೆ ಗಂಟಲು ಬಿಗಿಯುತ್ತಿತ್ತು. ಕಷ್ಟದಿಂದ "ಏನಜ್ಜಿ ಅದು?" ಅಂದೆ.

"ಅಯ್ಯೋ, ನೋಡು ಬಾಪ್ಪ ಅಡಿಗೇ ಮನೇಲಿ. ಕೈಯಾರ ಬೆಂಕಿ ಹಾಕಿ ಸುಟ್ನೆಲ್ಲಪ್ಪಾ...." ಅಂದಳು.

ಅಡಿಗೆಮನೆಗೆ ಓಡಿದೆ. ಒಳಕ್ಕೆ ತಲೆ ಇಡುವುದಕ್ಕಾಗಲಿಲ್ಲ. ಕೆಟ್ಟವಾಸನೆ! ಒಲೆಯಿಂದ ಬುಸು ಬುಸು ಹೊಗೆ ಏಳ್ತಾ ಇದೆ. ನನಗೇನೂ ಅರ್ಥವಾಗಲಿಲ್ಲ. ಸರ್ರನೆ ಮನೆಯೊಳಗೆಲ್ಲಾ ಒಂದುಸಾರಿ ಓಡಾಡಿ ಬಂದೆ. ಮಗು ತೊಟ್ಟಿಲಲ್ಲೇ ಮಲಗಿ ಸುಖವಾಗಿ ನಿದ್ದೆಮಾಡುತ್ತಿದೆ. ತಂದೆ ಬೆಳಗಿನ ವಾಯು ಸಂಚಾರಕ್ಕೆ ಹೋಗಿದ್ದಾರೆ. ತಾಯಿ ಹಿತ್ತಿಲಲ್ಲಿ. ತಲೆಯ ಮೇಲೆ ಕೈಹೊತ್ತು ರೋದಿಸುತ್ತಾ ಕುಳಿತಿದ್ದ ಅಜ್ಜಿಯ ಹತ್ತಿರಕ್ಕೆ ಧಾವಿಸಿದೆ.

"ಏನಜ್ಜಿ ಅದು, ಸರಿಯಾಗಿ ಹೇಳು",

"ಏನ್ಹೇಳಪ್ಪಾ ನಿನಗೆ. ಒಬ್ಬ ಬ್ರಾಹ್ಮಣನ್ನ ಕೊಂದ ಪಾಪ ಬಂತಲ್ಲಪ ನನ್ನ ಪ್ರಾರಬ್ಧಕರ್ಮ. ನೆನ್ನೆ ಸಂಜೆ ತಾನೆ ಕಿಟಕಿಯಿಂದ ನುಸುಕೊಂಡು ಬಂದು ಹಾಲು ಕುಡೀತಿತ್ತು. ಮಡಿಕೋಲಿನಿಂದ ಒಂದು ಬಡಿದು ಅಟ್ಟಿದ್ದೆ. ಮತ್ತೆ ಎಲ್ಲೋ ಇಲಿಯ ಆಸೆಗೆ ಬಂದು ಒಲೇಲಿ ಮಲಕ್ಕೋಬೇಕೆ ಹಾಳು ಬೆಕ್ಕು ನನಗೆ ಪಾಪ ಕಟ್ಟೋಕ್ಕೆ!"

"ಅಯ್ಯಯ್ಯೋ, ಏನನ್ಯಾಯ ಮಾಡ್ಬಿಟ್ಟೆ! ಅಡಿಗೆ ಮನೆ ಬಿಟ್ಟು ಬರೋವಾಗ ಕಿಟಕಿ ಹಾಕ್ಕೊಂಡು ಬಾ ಅಂತ ಎಷ್ಟು ಹೇಳಿದರೂ ನೀನು ಕೇಳೊಲ್ಲ. ಏನ್ಮಾಡೋದೀಗ?"

ಅಷ್ಟುಹೊತ್ತಿಗೆ "ಏನೋ ಅದು ರಾದ್ಧಾಂತ" ಅನ್ನುತ್ತಾ ಅಮ್ಮನೂ ಬಂದಳು.

"ನೋಡು, ರಾತ್ರಿ ಬೆಕ್ಕು ಬಂದು ಒಲೇಲಿ ಬೆಚ್ಚಗೆ ಮಲಗಿಬಿಟ್ಟದೆ. ಆಜಿ ಅದಕ್ಕೆ ಅಗ್ನಿಸಂಸ್ಕಾರ ಮಾಡಿಬಿಟ್ಟದಾಳೆ!" ಅಂದೆ.

ಅದಕ್ಕಮ್ಮ "ಹೋಗ್ಲಿ ಬಿಡು, ಪೀಡೆ ಕಳೀತು. ನಿತ್ಯ ಬಂದು ಹಾಲು ಕುಡಿದು ಹೊಟ್ಟೆ ಉರಿಸಿಕೋತಿತ್ತು" ಅಂದುಬಿಟ್ಟಳು.

ಅಜ್ಜಿ "ಅದ್ಸರಿ, ನನ್ಗತಿ ಹೇಳೇ. ಒಂದು ಬೆಕ್ಕನ್ನ ಕೊಂದ್ರೆ ಒಬ್ಬ ಬ್ರಾಹ್ಮಣನ್ನ ಕೊಂದ ಪಾಪವಂತಲ್ಲೇ" ಅಂದಳು.

ಆ ಹೊತ್ತಿಗೆ ವಾಯು ಸಂಚಾರ ತೀರಿಸಿಕೊಂಡು ಮನೆಗೆ ಬಂದ ಅಪ್ಪ, "ಅಯ್ಯಯ್ಯೋ, ಏನೇ ಇದು ದುರ್ನಾತ! ಮನೆತುಂಬ ಹೊಗೆ!" ಅನ್ನುತ್ತಾ ಅಡಿಗೆ ಮನೆಯ ಹತ್ತಿರಕ್ಕೆ ಬಂದರು. ಕೂಡ್ಲೆ ಅಮ್ಮ ನನ್ನ ಕಡೆಗೆ ತಿರುಗಿ "ಹೋಗಿ ಬೆಂಕೀನಾದ್ರೂ ಎಳೆದು ನೋಡಬಾರದೇನೋ?" ಅಂದಳು.

"ನಾನು ಮುಟ್ಟೊಲ್ಲಮ್ಮ, ನನಗೆ ಹೆದರಿಕೆ" ಅಂದೆ.

ಅದಕ್ಕವಳೇ ಮೂಗುಮುಚ್ಚಿಕೊಂಡು ಸರ ಸರ ಸಿಪಾಯಿನ ಹಾಗೆ ಒಲೆಯ ಬಳಿಗೆ ಹೋದಳು. ಅಪ್ಪ ನಾನು ಅಜ್ಜಿ ಮೆಲ್ಲನೆ ಹಿಂಬಾಲಿಸಿ ನೋಡುತ್ತಾ ನಿಂತೆವು. ಅಮ್ಮ ಉದ್ದದ ಸೌದೆ ತುಂಡೊಂದನ್ನು ತೆಗೆದುಕೊಂಡು ಒಲೆಯಿಂದ ಬೆಂಕಿಯನ್ನೆಲ್ಲಾ ಹೊರಕ್ಕೆಳೆದು ಹಾಕಿದಳು. ಬೆಂಕಿಯ ಜೊತೆಯಲ್ಲಿ ಸುಟ್ಟುಳಿದು ಹೊಗೆಯಾಡುತ್ತಿದ್ದ ಅರ್ಧಗೋಳದ ವಸ್ತುವೊಂದು ಉರುಳಿಕೊಂಡು ಬಂತು.

"ಅಯ್ಯೋ, ಮಗುವಿನ ರಬ್ಬರ್ ಚೆಂಡು! ಬೆಕ್ಕೂ ಇಲ್ಲ ಏನೂ ಇಲ್ಲ! ರಾತ್ರೆ ಊಟ ಮಾಡೋವಾಗ ಮಗು ಹಿಡಿಕೊಂಡು ಆಡ್ತಾ ಇತ್ತು!" ಎಂದು ಅಮ್ಮ ಉದ್ಗಾರ ಎಳೆದಳು.

ಸದ್ಯ, ಅಜ್ಜೀ ಮನಸ್ಸಿಗೆ ಸಮಾಧಾನ! ಅವಳ ಗ್ರಹಚಾರ ಚೆನ್ನಾಗಿತ್ತು! ಬ್ರಾಹ್ಮಣನ್ನ ಕೊಂದ ಪಾಪ ಬರಲಿಲ್ಲ!

— ನ. ಸು.

---

# ಅಮ್ಮ ಕಾಣದ ಒಡವೆ

ಸಾತು—

ಮೇಡಂ ಹೇಳಿದರಮ್ಮ
ಮೌನ ಭೂಷಣವಂತೆ
ಮೌನ ಬಂಗಾರಂತೆ........

ಸಾತು ಅಮ್ಮ—

ಮೇಡಂ ಹೇಳಿದರೇನೆ!
ಬಂಗಾರಂತ ತಾನೆ?
ಹೇಳ್ಬೋಗ್ ಅಣ್ಣಂಗೇನೆ
ತರ್ತಾರೆ ಬಂಗಾರಾನೆ—

ಸಾತು ಅಪ್ಪ—

ಮೌನದ ಬಂಗಾರಾನ
ಅಮ್ಮ ಕಂಡವಳಲ್ಲ
ಅಮ್ಮ ಕಾಣದ ಒಡವೆ
ಬರಲಿ ನಿಂಗೇ ಎಲ್ಲ!

—ಸರೋಜಿನಿ.

# ಆಹ್ವಾನ

---

ಹೌದು! ಅನುಮಾನವೇ ಇಲ್ಲ! ಅಲ್ಲವೆಂದಿದ್ದದ್ದೆಲ್ಲ ಈಗ ಹೌದು ಎಂದು ತಿಳಿಯಿತು, ಅವನಿಗೆ. ಆ ತುಂಟನೋಟ, ಆ ವಾರೆಗಣ್ಣು, ಕುಡಿಹುಬ್ಬು, ಎರಡು ಕೆನ್ನೆಗಳಮೇಲೂ ಮಂದಹಾಸದಿಂದಾದ ಗುಳಿಗಳು.....

"ಆಹ್ವಾನ"? ಹುಂ! ಇಡೀ ಮುಖ ಆಹ್ವಾನವನ್ನೇ ಸೂಚಿಸುತ್ತಿತ್ತು. "ಛೆ! ಇಷ್ಟು ಹೊತ್ತು ತೆಗೆದುಕೊಂಡೆನೇ ಇದನ್ನು ತಿಳಿದುಕೊಳ್ಳಲು?" ಎಂದು ಅವನು ನಾಚಿದ.

ಲಕ್ಷಣವಾದ ಮುಖ; ಕುರುಳೋಳಿ, ಕಾಡಿಗೆ, ಗುಂಡು ಕೆನ್ನೆ. ಅಪ್ಸರೆ ಎನ್ನುತ್ತಾರಲ್ಲಾ ಹೀಗೆಯೇ ಕಂಡಿರಬೇಕು ಅವರು, ತಪಸ್ಸು ಮಾಡಿದವರಿಗೆ. ಕುಳಿತಿದ್ದ ಕುರ್ಚಿಯಿಂದ ತುಸು ಮುಂದಕ್ಕೆ ಬಾಗಿ, ಅವನು ದುರದುರನೆ ನೋಡಿದ.

ಕರ್ರ್ರಗಿನ ಕಣ್ಣು, ಕರ್ರ್ರಗಿನ ಕೂದಲರಾಶಿ, ಕರ್ರ್ರಗಿನ ಕಾಡಿಗೆ, ಕರ್ರ್ರಗಿನ ಸಾದಿನ ಬೊಟ್ಟು........ಆಹ!

ಅವನ ಕಣ್ಣುಗಳು ತಾವಾಗಿಯೇ ಆನಂದದಲ್ಲಿ ಮುಳುಗಿ ಮುಚ್ಚಿಕೊಂಡವು. ಇಷ್ಟು ಚೇಷ್ಟೆಗೂ ಅವಳ ಮುಖ ಕೊಂಚವೂ ಬದಲಾಗಲೇ ಇಲ್ಲ. ಅದೇ ತುಂಟನೋಟ, ಅದೇ ತುಂಟನಗೆ!

ಅವಳ ಕುಪ್ಪಸ, ತುಂಬತೋಳು....ಶಂಖದಂತಹ ಕಂಠ,....ಅವನು ತನ್ನ ವಿಚಾರ ವಾಹಿನಿಯದಲ್ಲಿ ಜೇನು ಬೆರೆಸಿ ಆಸ್ವಾದಿಸಿದ.

"ಆಹ್ವಾನ"...."ಆಹ್ವಾನ" ತನಗೆ ತಾನೇ ನಾಲ್ಕೈದುಬಾರಿ ಅವನು ಹೇಳಿಕೊಂಡ.

ತಕ್ಷಣವೇ ಎದ್ದ. ಎದ್ದು, ಆ ಫೋಟೊವನ್ನು ಕೈಗೆ ತೆಗೆದುಕೊಂಡ, ಅದರ ಕೆಳಗೆ, "ಆಹ್ವಾನ" ಎಂದು ಬರೆದ. ಅದೇ ಆ ಚಿತ್ರದಲ್ಲಿ ಮಿನುಗುವ ಭಾವಕ್ಕೆ ತಕ್ಕ ಹೆಸರೆಂದು ಅವನಿಗೆ ತೋರಿತು.

"ಸರಿ! ಸಾರ್! ನೀವೇನು ಹೆಸರಿಡುತ್ತೀರೋ ಇಡಿ, ನನ್ನ ಅಭ್ಯಂತರವೇನೂ ಇಲ್ಲ ನನಗೆ ಇಷ್ಟು ಮಾಡಿದರೆಸಾಕು ನೀವು....ನನ್ನ ಈ ಫೋಟೋನ ಎಕ್ಸಿಬಿಷನ್ನಲ್ಲಿ ಇರಿಸಿದರೆಸಾಕು. ಎಂದು ಆತನೂ ನುಡಿದ.

# ನಾನೂ ನಾಯಿಯೂ

(ಮತ್ತು ನಮ್ಮ ಕಥೆಯೂ)
ಎಂಬ ಚಿಕ್ಕದೊಂದೊಪೆರಂ

---

ಮೇಳ— ‘Dogs are not allowed’
ಧಿಯೇಟರ್ ಓವರ್ ಲೋಡ್
‘Master of Ballantrae’
ಸ್ಪೈಡ್ ರೀಲ್; ಮಿಕ್ಕಿ ದಿ ಮೌಸ್
‘Full House’

ನಾನು— ನನ್ನೀ ಮುದ್ದಿನ ನಾಯಿ ಮರಿ
ಇದು ನನ್ನಯ ಜೀವನವೆ ಸರಿ
ಕಾಲೇಜಿಗು ತಾ ಬರುವುದಿದು
ಸಿನಿಮವ ಬಿಡುವುದೆ? ಸರಿಯದಿದು.

ಅವನು— ನಾನಿದ ಬಿಡುವೆನೇ? ಇಲ್ಲಾ. ಸರ್,
ನನಗಿವೆ ಎಕ್ಸ್‌ಪ್ರೆಸ್ ಆರ್ಡರ್ಸ್.
C-in-Cಯೇ ಬಂದರು ಕೂಡ
P. M. ತಾನೇ ಹೇಳಿದರೂ,
M.L.A ಗಳೂ, M.P.ಗಳೂ
ನಾಯನು ತಂದರೆ ನೀ ಬಿಡಬೇಡ
ಎಂದರು ಹೌಸಿನ ಮ್ಯಾನೇಜರ್.

ನಾನು— ಅಯ್ಯಾ! ನನ್ನಯ ಸೀಟು ರಿಸರ್ವ್.
ಬಹು ಚಿಕ್ಕದು ಈ ನಾಯಿಮರಿ
ಪ್ಯಾಂಟಿನ ಜೇಬಲಿ ತೂರಿಸಿಕೊಂಡು
ಪೊಗುವೆ ನೊಳಕೆ. ಒಪ್ಪಯ್ಯಾ! ಪ್ಲೀಸ್.
ಫ್ಲಿನ್ನಿನ ಆ್ಯಕ್ಷನ್ ಆದರು ಕೂಡ
ಶುನ್ನಿಯಿದಿಲ್ಲದೆ ಸಿನಿಮವೆ ಬೇಡ.

ಅವನು— ಹಾಗಾದರೆ ಕುನ್ನಿಯನಿಲ್ಲಿಟ್ಟು
ನನಗೇ ಅದರಾ ಛಾರ್ಜನು ಕೊಟ್ಟು
ನೀ ಪೊಳಗಡೆ ಹೋಗಿ
ಜಂಗುಳಿಯಲಿ ಹೇಗೋ ಸಾಗಿ.
ಕುನ್ನಿಗೆ ಸಿನಿಮವ ತೋರಿಸುವೆ.

ಮೇಳ— ದ್ವಾಪರ ಯುಗದ ಯುಧಿಷ್ಠಿರ ರಾಜ!
ಈತನ ಗುರು ವಹ ಮಾತಿದು ಸಾಜ!
ನರಕಕು ಹೋಯಿತು ಸಾಯಿಮರಿ.
ಅವನಿಗದಿಲ್ಲದೆ ಸ್ವರ್ಗವೆಬೇಡ
ರಾಜರು, ಗುರುಗಳು ತುಂಬಿದ ಸ್ವರ್ಗ.
ನಾಯಿಯ ನೊಳಬಿಡದಿಹುದತಿ ಚೋದ್ಯ
ಇದರ ರಹಸ್ಯವನರಿ, ಅಪವರ್ಗ!

---



“ರಂಗಣ್ಣ ಮದುವೆ ಸೂಟು ಹಾಕ್ಕೊಂಡು ಬಂದಾಗಲೆಲ್ಲಾ, ಸುಮ್ಮ ಸುಮ್ಮನೆ ಅವನ ಮೇಲೆ ಉರಿದು ಬೀಳ್ತಿರ್ತಾರೆ, ಸಾಹೇಬ್ರು. ಯಾಕೋ!?....”

# ಯಾತ್ರಿಕರ ಪತ್ರ

## (೧೦)

ನಾನು ರಾಜ ಚಂದಿ ಬಂದಿಳಿದ ಊರು ಜೋಗುಂಬೆ. ಜೀವನದ ಬೆಳವಣಿಗೆಯ ಅಂತಸ್ತಿನಲ್ಲಿ ಗೊರಿಲ್ಲಾ ಮಟ್ಟವನ್ನು ಮುಟ್ಟಿತ್ತು. ಅಂದರೆ–ತುಸ ನಾಗರಿಕತೆ ಜೊತೆಗೆ ಸಾಕಷ್ಟು ಅನಾಗರಿಕತೆ ಮೇಲೋಗರವಾಗಿ ಸಾಂಸ್ಕೃತಿಯು ಅಲ್ಲೋಲ ಕಲ್ಲೋಲವಾಗಿತ್ತು. ಜನರು ಕಿವಿಯಿಂದ ಕೆಳಕ್ಕೆ ಮನುಷ್ಯ ಸ್ವಭಾವದ ಮಟ್ಟವನ್ನು ಹತ್ತಿದ್ದರೂ ಕಿವಿಯಿಂದ ಮೇಲೆ ಗೊರಿಲ್ಲಾ ಮಟ್ಟದಲ್ಲಿದ್ದಾರೆ. ನಾವು ಜೋಗುಂಬೆ ನುಗ್ಗಿದ ಮರುಕ್ಷಣ ಊರಮನೆಗಳು ಖಾಲಿಯಾದುವು. ಜನ ನಮ್ಮನ್ನು ನೋಡೋಕೆ ನಮ್ಮೆಡೆ ಧಾವಿಸಿದರು. ನಮಗೆ ತಿಳಿಯದಂತೆಯೇ ನಮ್ಮಲ್ಲಿ ತುಸ ಜಂಭ ಉಕ್ಕಿತು. ಊರ ಮಧ್ಯೆ ಇಳಿದೆವು.

ಒಬ್ಬ ಮುಂದೆ ಬಂದು "ಮಿಕ್ಕೋರು ಬರ್ನಿಲ್ವಾ?" ಅಂದ.

ನನಗರ್ಥವಾಗಲಿಲ್ಲ. ರಾಜನ್ನ ಚಂದೀನ ನೋಡಿದೆ. "ಯಾವ ಮಿಕ್ಕೋರು" ಅಂದೆ.

"ಇವತ್ತಿನ ಆಟದವರು" ಅಂದ.

"ನಾವು ಯಾವ ಆಟದವರೂ ಅಲ್ಲಪ್ಪ" ಅಂದೆ. ಜನ ನಮ್ಮನ್ನು ಕೈಬಿಟ್ಟರು.

ನಮ್ಮ ಹಾದಿ ಬದಲಾಯಿಸಿ, ಆ ಊರ ಶ್ಯಾನುಭೋಗರನ್ನು ಹುಡುಕಿ-ಅರಳೀ ಕಟ್ಟೆಯ ಮೇಲೆ ಹಿಡಿದು – ಮಾತಿಗೆ ಕೂತೆವು. ಸ್ಥಳಪುರಾಣ ಶ್ರವಣವಾಯಿತು. ಅದೇ–ತ್ರೇತಾಯುಗದಲ್ಲಿ ವಾಲಿಯ ರಾಜಧಾನಿ. ವಾಲ್ಮೀಕಿಗೆ ತಿಳಿದಿಲ್ಲ. ರಾಜ ಕೇಯದ ಮಾತಾಯಿತು. ಇನಾಮತಿ ರದ್ದು, ಶೃಂಗೇರಿ ಜಹಗೀರು, ಪಾನನಿರೋಧ, ವ್ಯಾಪಾರ ಹತೋಟಿ, ಸಂತಾನ ಹತೋಟಿ, ವಿದ್ಯಾಭ್ಯಾಸ ಸುಧಾರಣೆ, ಹಿಂದೀ ಪ್ರಚಾರ, ಜಲಜನಕ ಬಾಂಬು ಎಲ್ಲಾ ವಿಷಯವೂ ಚರ್ಚೆಯಾಯಿತು.

"ಇನ್ನು ಮೇಲೆ ನಮ್ಮ ಒಕ್ಕಲುಗಳಿಗೆ ಮೀನು ತಿನ್ನಬೇಡಿ ಅಂತ ಹೇಳಬೇಕು" ಅಂದರು. ಶ್ಯಾನುಭೋಗರು ತುಸಹೊತ್ತು ಸುಮ್ಮನಿದ್ದು,

"ನಮ್ಮಲ್ಲಿ ಸಂಸ್ಕೃತಿ ಪ್ರಚಾರ ಚೆನ್ನಾಗಿ ನಡೆಯುತ್ತಿದೆ" ಅಂದರು.

ನುಂಗಿದೆ- ಗಂಟಲು ಒಣಗಿತ್ತು. ನೀರು ತರಿಸಿ ಕುಡಿದೆ.

"ಓಹೋ!" ಅಂದೆ.

"ಹೌದು. ಈ ದಿನ ನಮ್ಮಲ್ಲಿ ಭಾಗವತರ ಬೈಲಾಟವಿದೆ; ತಾವು–ತಮ್ಮಂಥ ಹವರು ನೋಡಬೇಕಾದ್ದು" ಅಂದರು.

ನನಗೆ ಆಗ ತಿಳಿಯಿತು. ನಮಗೆ ಆ ಊರಿನಲ್ಲಿ ಸಿಕ್ಕಿದ ಸ್ವಾಗತದ ಅರ್ಥ.

"ನಾಟಕ ಯಾವುದು?" ಅಂದೆ.

"ಹರಿಶ್ಚಂದ್ರನ ಕಾಳಗ" ಅಂದರು.

ನನಗೆಲ್ಲೂ ಆ ಕಥೆ ಓದಿದ ಜ್ಞಾಪಕವಿಲ್ಲ. ಹರಿಶ್ಚಂದ್ರನ ಕಥೆ ಗೊತ್ತು. ಕಾಳಗಗಳು ಗೊತ್ತು. ಆದರೆ ಹರಿಶ್ಚಂದ್ರನ ಕಾಳಗ ಗೊತ್ತಿರಲಿಲ್ಲ.

"ಎಲ್ಲಿ ಬರುತ್ತೆ ಕಥೆ" ಅಂದೆ

"ಇಲ್ಲೇ–ಈ ಊರು ಭೈರವನ ಗುಡಿ ಮುಂದೆ" ಅಂದರು.

"ಅದಲ್ಲ ನಾನು ಕೇಳಿದ್ದು. ನಾಟಕದ ಕಥೆ ಯಾವ ಪುರಾಣದಲ್ಲಿದೆ?" ಅಂದೆ.

"ಇದೇನು ಸ್ವಾಮಿ ಹೀಗೆ ಕೇಳ್ತೀರಿ? ಹರಿಶ್ಚಂದ್ರ ಸತ್ಯವಂತನ ಕಾಳಗ ನಿಮಗೆ ಗೊತ್ತಿಲ್ಲವೆ?" ಅಂದರು ಶ್ಯಾನುಭೋಗರು.

ಬಾಂಡ್ಲಿಯಿಂದ ಬೆಂಕಿಗೆ ಹಾರಿದ ಹಾಗಾಯ್ತು.

"ಇದೇ ಊರ್ನಲ್ಲಿ ಹೋದೊರ್ಷ ಐನೂರು ಜನರ ಮುಂದೆ ಆಡಿದ್ದಾರೆ. ಈ ವರ್ಷ – ನಮ್ಮೆಲ್ಲರ ಬಯಕೆಮೇಲೆ ಪುನಃ ಆಡಿಸುತ್ತೇವೆ" ಅಂದರು.

ನೋಡಿಯೇ ಬಿಡೋಣ ಅಂತ ಅನ್ನಿಸಿತು. ಒಪ್ಪಿ ನಿಂತೆವು.

ರಾಜ – ಶ್ಯಾನುಭೋಗರನ್ನು ಕೇಳಿದ "ಈ ನಿಮ್ಮೂರಿನ ಆಮದು ರಫ್ತುಗಳೇನಾದರೂ ಉಂಟೋ?" ಅಂತ.

"ಹಾಗೆಂದರೆ?" ಅಂದರು.

ಚಂದಿ "ಅಂದರೆ – ಇಲ್ಲಿ ಬೆಳೆಸಿದ ಪದಾರ್ಥಗಳು ಹೊರಕ್ಕೂ, ಹೊರಗಿನವು ನಿಮ್ಮೂರಿಗೂ, ಏನೇನು ಬರುತ್ತೇ" ಅಂದ.

ಶ್ಯಾನುಭೋಗರು ತುಸಹೊತ್ತು ಆಲೋಚಿಸಿ,– "ನೋಡಿ–ನನ್ನ ಕೈಹಿಡಿದವಳು ಗುಬ್ಬೂರಿನ ಹೆಣ್ಣು. ನನ್ನ ತಮ್ಮನಿಗೆ ಕಂಡಕದ ಹೆಣ್ಣು ತಂದಿದ್ದೇವೆ. ನನ್ನ ತಂಗೀನ ಭಮ್ಮರಡೀಗೆ ಕೊಟ್ಟಿದ್ದೇವೆ" ಅಂದರು.

ನಾನು ನಗಲಿಲ್ಲ. ಆದರೆ ನನ್ನ ಪಕ್ಕೆಲುಬೊಂದು ಫಟ್ಟೆಂದಿತು. ಚಂದಿ, ರಾಜ–ಏನೋ ನೆಪದಿಂದ ಕರವಸ್ತ್ರಾನ ಬಾಯಿಗೆ ಮುಚ್ಚಿ ಹೊರಬಿದ್ದರು.

ನಾನು – "ಶ್ಯಾನುಭೋಗರೇ–ನೀವು ಹೇಳೋದು ಸರಿಯಾದ ಮಾತು. ಆದರೆ ನಾವು ಕೇಳಿದ್ದು ಏನೆಂದರೆ – ನಿಮ್ಮ ಊರಿನ ಜನಗಳಿಗೆ ಬೇಕಾದ ಪದಾರ್ಥ ಇಲ್ಲೇ ಬೆಳೀತೀರಾ? – ಅಥವಾ ಸಿಗದಿರುವ ಸಾಮಾನನ್ನು ಎಲ್ಲಿಂದ ತರಿಸುತ್ತಾರೀ? – ಇಲ್ಲಿ ಹೆಚ್ಚು ಏನಾದರೂ ಬೆಳೆದು ಬೇರೆ ಊರಿಗೆ ಕಳುಹಿಸುತ್ತೀರಾ? ಅಂತ. ಏಕೆಂದರೆ– ಮಸಲಾ – ಇದ್ದಕ್ಕಿದ್ದ ಹಾಗೆ ಈ ಊರಿಗೆ ಬರುವ ಹಾದಿಗಳೆಲ್ಲಾ ಒಂದಾಗಿ, ಒಂದು ಬಸ್ಸು, ಲಾರಿ, ಗಾಡಿಗಳಿಗೂ ಬರಲಿಕ್ಕಾಗದೆ. ನಿಮ್ಮೂರಿಗೂ ಪಕ್ಕದೂರಿಗೂ ಸಂಬಂಧವೇ ತಪ್ಪಿಹೋದರೆ – ಆಗ ನೀವು ಇಲ್ಲೇ ಬೆಳೆಯುವ ಆಹಾರ, ನೇಯುವ ಬಟ್ಟೆಯಿಂದ ಜೀವಿಸಬಲ್ಲಿರಾ?" ಅಂದೆ.

"ಏನನರ್ಥ ಸ್ವಾಮಿ? ದೇವರು ಕಾಪಾಡುತ್ತಾನೆ" ಅಂದರು.

"ಸೃಷ್ಟಿಸಿದ ತಪ್ಪು–ಕಾಪಾಡಲಿ"– ಅಂದುಕೊಂಡೆ.

ಇದೇ ತರಳೆಗಳಲ್ಲೇ ರಾತ್ರಿ ಹತ್ತು ಘಂಟೆಯಾಯಿತು. ರಂಗಸ್ಥಳಕ್ಕೆ ಹೋದೆವು. ಊರಿನ ಜನ, ಸುತ್ತಮುತ್ತ ಹಳ್ಳಿಗಳ ಜನ–ಹಾಸಿಗೆ ಹೊದಿಕೆ ಹೊತ್ತು–ಬಂದು ಸೇರಿದರು. ಜನರ ಮಧ್ಯೆ ಪಂಜುಗಳು–ಕಾಳಗದ ಭೂಮಿಯಾಗಿಯೇ ಇತ್ತು. ನಾವೂ ಹಾಗೂ ಹೀಗೂ ಸುತ್ತಿಕೊಂಡು–ಚಪ್ಪರದ ಕೆಳಗೆ ಬಣ್ಣ ಹಾಕಿಕೊಳ್ಳುತ್ತಿದ್ದ ತಾರೆಯರಿದ್ದೆಡೆ ಹೋದೆವು. ಅಲ್ಲಿನ ಸಂಭಾಷಣೆಯಿದು—

"ಲೋಯ್–ಸಂದ್ರಮತಿ ಟೋಪನ್ ತರ್ನಿಲ್ವಾ–ನಂಗೆ ಸಿಕ್ನಿಲ್ಲಾ"

"ಮಂಡೋದರೀದ್ದೈತೆ–ಆಕ್ಕೊಳ್ಳೊ !!

"ಮಂಡೋದರೀಗೆ?"

"ಅವನಿಲ್ಲ – ಇವತ್ನಾಟ್ಕದ್ಲಿ"

"ಬಿಡ್ಳ್ಳೀ–ಅವನ್ನುಮಿಕ್ಕಿಡ್ದಾನಾ?–ಸಿಗದುಬಿಟ್ಟಾನು–ಭಾಗವತರ್ನ"

ಭಾಗವತರು ಎದ್ದರು.

"ಇವತ್ತು ಮಂಡೋದರಿ ಇಲ್ಲ" ಅಂದರು.

"ಹಾಗಾರೆ ನಂಗೆ ದ್ರೌಪದೀನಾದ್ರೂ ಕೊಡಿ. ಅದೂ ಕಲ್ತಿವ್ನಿ"

"ನಿನ್ನ ಗಡ್ಡ ಮೀಸೆಗೇನ್ಮಾಡ್ತಿ? ಮಂಡೋದರಿ–ರಾಕ್ಷಸನೆಂದ್ತಿ–ಅವಿದ್ರೂ ಪರವಾಗಿಲ್ಲ. ಆದ್ರೂ ದ್ರೌಪತೀಗೆ ಮೀಸೆ ಅಸಯ್ಯ"

"ಅದೆಂದ್ಗೂ ಆಗ್ದು. ನಾನರಿಕೆ ಕಟ್ಟಿವ್ನಿ – ದ್ರೌಪತಿ ಪಾರ್ಟ್ನ ಪಸಂದಾಗಿ ಮಾಡಿ–ಜನಗೋಳು ಕೈ ಚಪ್ಪಾಳೆ ತಟ್ಟೇರೆ - ನಾನು ತಿರುಪತೀಗೇ ಹೋಗಿ ಮುಡಿ ಕೊಡ್ತಿನೀಂತ. ಇವತ್ತು ನಾನು ಜನರ ಮುಂದೆ ಬರೋನೇ - ನಾನೇ ಹೇಳ್ತೀನಿ— 'ನಾನು ದ್ರೌಪದೀಂ'ತ"

ನಾನು ಚಂದಿ ರಾಜ - ಚಪ್ಪಾಳೆ ತಟ್ಟಿ ಅವನನ್ನ ತಿರುಪತೀಗೆ ಬೇಗ ಅಟ್ಟುವ ಅಂತ ನಿರ್ಧರಿಸಿದೆವು.

ರಾತ್ರಿ ಹನ್ನೆರಡು ಗಂಟೆಗೆ ಆಟ ಶುರುವಾಯ್ತು. ಮೊದಲು ಹರಿಶ್ಚಂದ್ರ— ವಿದೂಷಕರ ಕಾಳಗವಾಯ್ತು – ಅದು ಪಡ್ಡೋಲಗವಂತೆ – ವಡ್ಡವಡ್ಡಾಗೇ ಇತ್ತು— ಮುಂದಿದ್ದ ಮೂರು ಪಂಜಿನಿಂದ ಬೆಂಕಿಹಾರಿ, ಮುಂದಿನ ಸಾಲಿನಲ್ಲಿದ್ದ ಹಿರಿಯ ಸಾಹಿತಿಗಳಿಗೆ ಬೆಂಕಿ ಸ್ಪರ್ಶವಾಯಿತು. ಹಿಂದಿನ ಸಾಲಿನಲ್ಲಿದ್ದ ಸಾಹಿತಿಗಳಿಂದ ಕರ ತಾಡನವಾಯಿತು. ಆಮೇಲೆ ವಿಶ್ವಾಮಿತ್ರ – ನಕ್ಷತ್ರಕರ ಕಾಳಗ ಶುರುವಾಯ್ತು. ಭಾಗವತರ ಗಂಟ್ಲು ಜೋರಾಯ್ತು. ಮೋಹನ ರಾಗವನ್ನು ಕೊಯ್ದರು. ಕಾಳಗದ ಜೋರಿನಿಂದ ಚಪ್ಪರಕ್ಕೆ ನಿಲ್ಲಿಸಿದ್ದ ಒಂದು ಬಂಬು ಉರುಳಿ ಚಪ್ಪರ ಬಾಗಿತು. ಸಮಯ ಕಾಯುತ್ತಿದ್ದ ದ್ರೌಪದಿ ಓಡಿಬಂದು ಚಪ್ಪರಕ್ಕೆ ಕೈಕೊಟ್ಟು ಹಿಡಿದು ನಿಂತಳು. ದ್ರೌಪದಿ – ಭಾಗವತರ ಕಾಳಗ ಶುರುವಾಯ್ತು.

ಘಂಟೆ ಎರಡಾಯ್ತು. ಆದರೂ - ಈ ಕಥೆಯನ್ನು ಇತ್ಯರ್ಥಮಾಡದೆ ಹೊರ ಡೋಕೆ ಇಷ್ಟವಿಲ್ಲದೆ ಅಲ್ಲೇ ಕೂತೆವು. ತುಸಹೊತ್ತಿನಲ್ಲೇ ಗಲಾಟೆ ಶುರುವಾಯ್ತು. ಮೂರು ಎತ್ತಿನ ಬಂಡಿಗಳು ರಂಗಸ್ಥಳಕ್ಕೆ ಬಂದು ನಿಂತವು. ಅದರಲ್ಲಿನಿಂದ ಐದಾರು ಮಂದಿ ದೊಣ್ಣೆಗಳನ್ಹಿಡಿದು ನುಗ್ಗಿ, ಚಪ್ಪರಕ್ಕೆ ಹಾರಿ – ಬಣ್ಣ ಹಾಕಿಕೊಂಡಿದ್ದ ಆಟ ದವರನ್ನ ದರದರದರಾಂತ ಎಳೆದುಕೊಂಡು ಹೋಗಿ ಬಂಡಿಗಳಲ್ಲಿ ಹೇರಿಸಿದರು.

"ಭಾಗವತರ್‍ಯಾರು?" ಅಂತ ಒಬ್ಬ ಘರ್ಜಿಸಿದ.

"ಇವರೇ" ಅಂತ ಮಿಕ್ಕ ನಾವೆಲ್ಲಾ ತೋರಿಸಿದೆವು.

ಅವರನ್ನೂ ಬಂಡಿಗೆ ಸಾಗಿಸಿದ್ದಾಯಿತು.

ಗಾಡಿಗಳು ಹೊರಡುಕ್ಕೆ ಮುಂಚೆ - ಬಂದಿದ್ದವರಲ್ಲಿ ಒಬ್ಬ ಮುಂದೆ ಬಂದು "ನಾನ್ಯಾರು ಗೊತ್ತೇ - ಭಂಡಾಪುರದ ಭಯಂಕರಗೌಡ! ಭಂಡೇಹತ್ರ ಜನ ಸೇರವ್ರೆ. ಆಟ ಅಲ್ಲಾಗಬೇಕು, ಯಾರು ಬೇಡ ಅಂತೀರ ಬನ್ನಿ ಮುಂದೆ" ಅಂತ ಘರ್ಜಿಸಿದ.

ನಾನು ರಾಜ ಚಂದಿ ಹಿಂದಕ್ಕೆ ಸರಿದೆವು. ಮಿಕ್ಕವರೆಲ್ಲಾ ನಮ್ಮ ಹಿಂದಿದ್ದರು.

ಚಂದಿ "ಯಾವಾಟ ಗೌಡ್ರೇ?" ಅಂದ.

"ಮೀನಾಕ್ಷೀ ಕಲ್ಯಾಣ" ಅಂದರು.

ಆಗ ಭಾಗವತರು ಎದ್ದು "ಅಯ್ಯೋ ಅದಕ್ಕೆ ನಾವು ತಯಾರಿಲ್ಲ. ಮೀನಾಕ್ಷಿ ಟೋಪನ್ನು, ಕಿರೀಟ, ಬಿಲ್ಲು, ಬಾಣ, ನಮ್ಹತ್ರಿಲ್ಲ" ಅಂದರು.

ಆದಕ್ಕೆ ಭಯಂಕಗೌಡರು— “ಸುಮ್ನೆ ಕೂರ್ರೀ. ಹರಿಶ್ಚಂದ್ರನ ಹೆಂಡತೀನ ಮೀನಾಕ್ಷೀನ ಮಾಡಿ, ಹರಿಶ್ಚಂದ್ರನ್ನ ಮೀನಾಕ್ಷೀ ಗಂಡನ್ನ ಮಾಡಿ ಬಿಲ್ಲು ಬಾಣ ಇಲ್ದಿದ್ರೆ ನನ್ನ ಸ್ವಂತ-ಕೇಪಾಕೋದು ಗನ್ನೈತೆ. ತಕೊಳ್ಳಿ. ಆರು ಅಂದಿ ಹೊಡೆದಿದ್ದೀನಿ ಓದೊರ್ಷ ಅದರಲ್ಲಿ. ನಿಮ್ಮ ಪದ ನೀವೇಳಿ. ಭಾಗವತರೇ - ಹೇಳ್ತೀರೊ ಇಲ್ವೊ?!?” ಅಂದರು.

“ಆಗಲಿ” ಅಂತ ಗಾಡಿ ಅಡಿಯಿಂದ ಧ್ವನಿ ಬಂತು.

ದ್ರೌಪತಿಯೂ ಭಯಂಕಗೌಡರ ರಂಗಸ್ಥಳಕ್ಕೆ ಹೊರಟು ಹೋದರು ಅವನಿಗಿನ್ನೂ ತಿರುಪತಿಯಾತ್ರೆ ಲಭಿಸಿಲ್ಲ ನಮ್ಮ ಯಾತ್ರೆ ಮುಂದುವರಿಸಿದೆವು.

—“ಕ್ಷೇಷ”

---



# ಮಗಳ ಗಂಡ

"ಭಾವ ಬಂದ" ಎಂದು ಗುಂಡು ಹಾರಿಸಿದಳು ರುಕ್ಕು. ಮಗಳ ಮುಖ ಬಿಳಿಯಾಯಿತು. ಹೆಣ್ಣು ಹೆತ್ತವನ ಮುಖ ಹುಳಿಯಾಯಿತು. ಮಗಳ ತಾಯಿ ತಲೆ ಆಡಿಸಿದಳು. ನಾಯಿ ಬೌ ಎಂದಿತು. ಮತ್ತೇಕೆ ಬಂದ ಈ ಭಂಡ ಎಂದು ಚಿಂತಾಮಣಿ ರಾಯರಿಗೆ ಚಿಂತೆಯಾಯಿತು. ಜೀವಣ್ಣ ಮತ್ತೇಕೆ ಬಂದಿರಬಹುದು ?

ಬಂದವನು ನೇರ ಮುಂದಿನ ರೂಮನ್ನು ಆಕ್ರಮಿಸಿದ. ಅದರಲ್ಲಿ ನಾರಾಯಣನ ಮೇಜು ಪುಸ್ತಕ ಇತ್ಯಾದಿ ಇತ್ಯಾದಿ ಹೈಸ್ಕೂಲಿನ ಹೈದನ ಸಲಕರಣೆಗಳೆಲ್ಲಾ ಇದ್ದುವು. ಮುಲಾಜು ನೋಡದ ಮಾರ್ವಾಡಿಯಂತೆ ಪುಸ್ತಕ–ಮೇಜು ಕುರ್ಚಿ ಹೊರಕ್ಕೆಳದು ಹಾಕಿದ. ಇದ್ದ ಮಂಚದ ಮೇಲಿನ ಹಾಸಿಗೆ ಸುರುಳಿ ಕಿತ್ತೊಗೆದ, ತನ್ನ ಹೊಲ್ಡಾಲು ಅಲ್ಲಿ ಹರಡಿದ, ಪೆಟ್ಟಿಗೆ ಮಂಚದ ಕೆಳಗೆ ಸರಿಸಿದ, ಹಾಯಾಗಿ ಕಾಲು ಚಾಚಿ ಉರುಳಿದ ಜೀವಣ್ಣ. ಇದೆಲ್ಲಾ ಚಿಂತಾಮಣಿ ರಾಯರು ನೋಡುತ್ತಿದ್ದ ಹಾಗೇ ನಡೆಯಿತು.

ನಿಜ, ಅವನು ಕೇವಲ ತಿಂಗಳ ಕೆಳಗೆ ಮನೆಬಿಟ್ಟು ಹೋಗಿದ್ದ. ಆಚೆ ಸಲದ ದೀಪಾವಳಿಗೇ ಕರೆಸಬಾರದಿತ್ತೆಂದು ಚಿಂತಾಮಣಿಯವರ ಅರ್ಧಾಂಗಿ ಗೊಣಗಿದ್ದರು- ಏಕೆಂದರೆ ಮೊದಲ ದೀಪಾವಳಿಗೆ ಝಾಂಡ ಹಾಕಿದ ಮೊಂಡ ಬಂಡಿ ಏರಬೇಕಾದರೆ ಮೂರು ದೀಪಾವಳಿ ಬಂದಿತ್ತು. ಮೊದಲು ಮಾಡಿದ ಮಿಸ್ಟೇಕು ಮಾವನದೇ ಎಂದು ಮಗಳ ಗಂಡನ ವಾದ. ಅವರೇ ಹೆಣ್ಣು ಕೊಡದಿದ್ದರೆ ನಾನೆಲ್ಲಿ ಇವರಿಗೆ ಗಂಟು ಬೀಳುತ್ತಿದ್ದೆ ಎನ್ನುವ ವಾದ ಜೀವಣ್ಣರಾಯನದು. ಅದೂ ನಿಜವೆ. ಪಾಪ ಸುಮ್ಮನೆ ಅವನನ್ನು ಅಂದು ಪ್ರಯೋಜನವಿಲ್ಲ ಜಳ ಜಳನೆ ಕಣ್ಣಿಂದ ನೀರು ಒಸರಿ ಬಂತು. ಯಾರು ನೋಡಿದ್ದರೂ "ಅಯ್ಯೋ ಪಾಪ" ಎಂದೆನ್ನುವ ದೃಶ್ಯ.

ಚಿಂತಾಮಣಿ ರಾಯರ ಮನಸ್ಸು ಕರಗಲಿಲ್ಲ.

"ಲೇ ೯ ೯ ... ಇಲ್ಲಿ ಬರಬಾರದೇ ೯ ೯" ಎಂದು ರಾಗವಾಗಿ ಎಳೆದು ಹೊರಹೊಮ್ಮಿ ಸಿದ ನಾದ ಸಂಪತ್ತು ಎಲ್ಲಿ ಕತ್ತನ್ನೇ ಎಳೆದು ಹರಿದು ಬಿಡುವುದೋ ಎನ್ನುವಷ್ಟರ ಮಟ್ಟಿಗಿತ್ತು.

"ನಾನು ಒಂದೇನು—ಮಾಡಬೇಕಾಗಿದೆ, ಯಾಕೀ ಅರ್ಭಟ" ಎಂದು ಸೌಟು ಹಿಡಿದೇ ಹೊರಬಂಧರು ಲಲಿತಮ್ಮ. ಪಶ್ಚಾತ್ತಾಪ ಪಡುವ ಕಡೆ ಕಡುಕೋಪ ತೋರ್ಪುದುಂಟೆ!

"ಅಲ್ವೇ ಏನು ಅಡಿಗೆ ಮಾಡ್ತೀಯ .. ಅಳಿಯ ದೇವರು ಬಂದಿದ್ದಾರಲ್ಲಾ "

ಜೀವಣ್ಣನ ಮುಖ ಅರಳಿತ್ತು, ಕಣ್ಣೀರು ಬತ್ತಿಹೋಯಿತು. "ಸ್ನಾನವಾಗಿದೆ —ಒಗೆದ ಟೌಲು ಒಂದು ಕೊಟ್ಟರೆ ಸಾಕು—ನಾನು ಸಿದ್ಧ" ಎಂದು ಒಂದು ತಿಂಗಳಿಂದಲೂ ಊಟ ಕಾಣದ ಹಸಿದ ತೋಳನಂತೆ ಹೇಳಿದ. ಅವನೇ ಮತ್ತೆ ಹೇಳಿದ.

"ಅತ್ತೇ ಸೊಂಡಿಗೆ ಗೊಜ್ಜು—ಮೊದಲ ದೀವಳಿಗೆಗೆ ಮಾಡಿದ್ದ ಮೆಣಸಿನ ಕಾಯಿ ರಸ ಮರೆತಿಲ್ಲ ಅದೇ ಮಾಡಿ" ಎಂದು ಮತ್ತೆ ಯಥಾಪ್ರಕಾರ ಅಲ್ಲಿಯೇ ಸ್ಥಿರವಾಗಿ ಉಳಿಯುವ ಮನೆಯ ಮಗನಂತೆ ಹೇಳಿದ.

"ಅಯ್ಯಾ— ಜೀವಣ್ಣ—ಇಲ್ಲಿ ನೋಡು ಖಂಡಿತ ಮುಂದಿನ ಮೂರು ತಿಂಗಳಲ್ಲಿ ನಿನ್ನ ನಿಷೇಕ ಏರ್ಪಡಿಸುತ್ತೇನೆ. ದಯವಿಟ್ಟು ಅಲ್ಲಿನತನಕ ನಿನ್ನ ಊರಲ್ಲಿಯೇ ಇರಲಾರೆಯಾ ? . " ಎಂದು ಅಂಗಲಾಚಿದರು ಚಿಂತಾಮಣಿ.

"ಮಾವಾ! ಈ ಮಾಯಾ ಪ್ರಪಂಚದಲ್ಲಿ ನಾನು ಯಾರು ನೀನು ಯಾರು, ಅಲ್ಲಿ ಇರು ಎನ್ನಲಿಕ್ಕೆ ನೀನು ಯಾರು—ಇರಲಿಕ್ಕೆ ನಾನು ಯಾರು! ಯಾರು ಯಾರಿಗೆ ಪುರಂದರ ವಿಠಲ, ಈ ಮಾಯಾ ಪ್ರಪಂಚದಲ್ಲಿನ ಪ್ರತಿ ಕಾರ್ಯಕಲಾಪಗಳೂ ಆ ಕಪಟನಾಟಕ ಸೂತ್ರಧಾರನ ಕೈಯ್ಯಲ್ಲಿದೆ ಎಂಬುದು ತಿಳಿಯದ ವಿಷಯವೆ! ಮಾವಯ್ಯಾ! ಅವನ ಅಂತರಂಗ ಪ್ರೇರಣೆಯಿಂದ ನಾನು ಮತ್ತೆ ರೈಲು ಹತ್ತಿ ಇಲ್ಲಿಗೆ ಬಂದದ್ದು ಸುಳ್ಳೆ?....ನಡಿಯಿರಿ ತಡವೇಕೆ ಬಡಿಸಬಾರದೆ ಅತ್ತೆಮ್ಮಾ...."

—ಎಂದಾಗ ಮಾವ ಚಿಂತಾಮಣಿಗೆ ಮೂರ್ಛೆ ಬರುವುದೊಂದು ಬಾಕಿ. ಈ ವಾದಸರಣಿ ಈ ಹಿಂದೆ ಬಂದಿದ್ದಾಗ ಇರಲಿಲ್ಲ. ಯಾವನೋ ಇವನ ತಲೆಯಲ್ಲಿ ತುಂಬಿರುವ ವಿಷಯ ಉರು ಹೊಡೆದು ಹೊರಗೆಡುತ್ತಿರುವನೆಂಬುದು ಮಾತ್ರ ಹೊರಬಿದ್ದಂತಾಯಿತು.

"ಜೀವಣ್ಣಾ – ಇದು ಕೇವಲ ಕಪಟನಾಟಕದ ಮಾತು – ನಿನ್ನ ಅಂತರಂಗ ಪ್ರೇರಣೆಗೆ ಕಾರಣರಾರು?" ಎಂದು ನೇರವಾದ ಪ್ರಶ್ನೆ ಕೇಳಿದರು.

— ಈಗ ಮಾತ್ರ ಜೀವಣ್ಣ ತಬ್ಬಿಬ್ಬಾದ. ಇದೇ ಪಟ್ಟಿನಲ್ಲೆ ಹಿಡಿದು ಜಗ್ಗಿದರೆ ಉತ್ತಮವೆಂದು "ಹೇಳು – ಯಾರು ಆ ಸೂತ್ರಧಾರ – ಹೀಗೆ ಇನ್ನೊಬ್ಬರ ಸೂತ್ರದ ಬೊಂಬೆಯಂತೆ ಬೊಗಳುವುದಕ್ಕಿಂತ ಸ್ವಯಂಭುವಾಗಿದ್ದರೇ ಉತ್ತಮ"

—ನಿಜ. ಜೀವಣ್ಣ ಸೂತ್ರದ ಬೊಂಬೆ. ಎಲ್ಲಿಂದಲೋ ಎಳೆದ ಸೂತ್ರ ಇಲ್ಲಿ ಕಾಲು, ಕೈ, ಕತ್ತು ಆಡಿಸುತ್ತಿತ್ತು. ಅದಕ್ಕಾಗಿ ಪಶ್ಚಾತ್ತಾಪದಿಂದ ಹೇಳಿದ—

"ಏನೆಂದು ಹೇಳಲಿ ಮಾವ – ನಿಜ ನಾನು ಸೂತ್ರದ ಬೊಂಬೆ – ಕಾಣದ ಸೂತ್ರ ನನ್ನನ್ನು ಬಂಧಿಸಿದೆ, ಆ ಬಂಧನಕ್ಕೆ ನಾನು ಬೇಡವೆಂದು ಅಂಗಲಾಚಿದೆ – ಆದರೆ ನಿಮ್ಮ ಮಗಳು ತಲೆತಗ್ಗಿಸಿ ಕಾಂತಿಯುಕ್ತ ಕಣ್ಣಲ್ಲಿ ನನ್ನ ಕದ್ದುನೋಡಿದಂದಿನಿಂದ ಅವಳ ಅನುರಾಗವೆಂಬ ಸೂತ್ರ ನನ್ನನ್ನು ಬಂಧಿಸಿದೆ, ಮಾವಾ – ಇದು ನನ್ನ ತಪ್ಪೇ,? ನೀವೇ ನಿಮ್ಮ ಕೀಚಲು ಗಂಟಲಲ್ಲಿ ಹೇಳಿ...."

—ಈ ಮಾತು ಚಿಂತಾಮಣಿರಾಯರನ್ನು ಅಳುಕಿಸಿತು. ಹೌದು ಅವರದು ಕೀಚಲು ಗಂಟಲು. ಭರ್ಜರಿಯ ಮೀಸೆ – ಪೊದರು ಹುಬ್ಬು ಗಂಡು ಎದೆ, ಎತ್ತರದ ನಿಲುವಿನ ಭವ್ಯಮೂರ್ತಿ. ಬಾಯಿಬಿಟ್ಟರೆ ಕೀಚುಪಾಚೆಂದು ಬೇರೆ ಯಾರೋ ಅವರ ಬಾಯಿಂದ ಮಾತಾಡಿದಂತಿರುತ್ತಿತ್ತು. ಅನೇಕಬಾರಿ ಅವರಿಗೇ ತಾವು ಆಡಿದ ಮಾತು ಇನ್ನೊಬ್ಬರು ಆಡಿರಬಹುದೇ ಎಂಬ ಸಂದೇಹ ಬಂದು ಅವರ ಕೂಗಿಗೆ ಅವರೇ "ಆಂ" ಎಂದದ್ದುಂಟು ಇದೆಲ್ಲಾ ಹೋಗಲಿ ಅನುಭವಿಸಬಹುದು ಆದರೆ ಅವರ ಕೈ ಹಿಡಿದ ಹೆಂಗಸಿಗೇಕೆ ಅಷ್ಟು ಭಾರೀ ಗಂಟಲು. ಗಂಡಹೆಂಡಿರಿಬ್ಬರೂ ಅಡಿಗೆ ಮನೆ ಯಲ್ಲಿ ಮಾಮೂಲಿಯ ಮಗಳ ನಿಷೇಕದ ವಿಷಯಕ್ಕೆ ಮಾತಿಗೆ ಮಾತು ಬೆಳೆದಾಗ ಅರಿಯದವರು ಹೊರಗಿಂದ ಕೇಳಿದರೆ - ಕೀಚಲು ಧ್ವನಿಯು ಹೆಣ್ಣಿನದೂ, ದಪ್ಪ ಗಂಟಲು ಗಂಡಿನದೂ ಇರಬೇಕೆಂದು ಎನ್ನಿಸುವುದು. ಅರಿಯದವರಿಗೇಕೆ - ಗಂಡ ಹೆಂಡಿರಿಬ್ಬರಿಗೂ ಒಬ್ಬೊಬ್ಬರು ಇನ್ನೊಬ್ಬರ ಕೊರಳಿಂದ ಮಾತಾಡುತ್ತಿರುವಂತೆ (ಅ) ಭಾಸಪಡುವರು. ಹೀಗಿರುವಾಗ ಕೇವಲ ಮಗಳ ಗಂಡ ತಮ್ಮ ಗಂಟಲ ವಿಷಯ ಕುರಿತು ಅಂದದ್ದು ಚಿಂತಾಮಣಿರಾಯರ ಚಿಂತೆಯನ್ನು ಚಿವುಟಿದಂತಾಯಿತು.

ಅವರೆಂದರು—

"ಅಯ್ಯಾ ಜೀವಣ್ಣ — ಅದೆಲ್ಲಾ ಹಳೆಯಪುರಾಣ ತೆಗೆಯಬೇಡ, ಇದು ಮರ್ಯಾದಸ್ತರ ಮಾತಲ್ಲ. ನಿನ್ನ ಅಂತರಂಗ, ಕಪಟನಾಟಕ, ಸೂತ್ರಬೊಂಬೆತ್ವ ಗಳಿಗೆಲ್ಲಾ ನನ್ನ ಮಗಳು ಕಾರಣವೆಂದು ತಾರಮ್ಮಯ್ಯ ಆಡಬೇಡ ತಿಳಿಯಿತೇ ಇದು ಚೆನ್ನಾಗಿರೋಲ್ಲ...."

"ಯಾವುದು ಅರ್ಧಾಂಗಿ ತಂದೆಯೆ?"

ಯಾವುದೇ - ನೀನು ಮತ್ತೆ ಇಲ್ಲಿಗೆ ಬಂದದ್ದು; ಇನ್ನೂ ಬಿಡಿಸಿ ಹೇಳಬೇಕೆ?"

"ಅದಕ್ಕೆ ನಾನು ಜವಾಬ್ದಾರನಲ್ಲ".

"ಮತ್ತೆ ಯಾರು?" ಅವುಡುಗಚ್ಚಿದರು.

"ನೀವು" ಶಾಂತವಾಗೇ ಹೇಳಿದ ಅಳೀಮಯ್ಯ.

"ನಾನೇ" ಈ ಕೂಗಿಗೆ ಹೆಂಡತಿಯು ಗಂಟಲಿದ್ದಿದ್ದರೆ? ಎಂದೆನ್ನಿಸಿತು ಸೀಟಿ ಹೊಡೆದಂತೆ ಸ್ವರ ಹೊರಟಾಗ.

"ಹೌದು" ಎಂದು ಮತ್ತೆ ಮಂಚದಮೇಲೆ ಮಲಗಿಬಿಟ್ಟ ಮಹರಾಯ.

"ಅದು ಹೇಗೆ ಬಿಡಿಸಿ ಹೇಳಬಾರದೇ" ಎಂದು ಸಿಡಿದ ಸಿಡಿಲಿನಂತೆ ಆರ್ಭಟಿಸಿದರು ಚಿಂತಾಮಣಿರಾಯರ ಅರ್ಧಾಂಗಿ. ಈ ಆರ್ಭಟಕ್ಕೆ ರಾಯರು ಬರೀ ಲಿಪ್ ಮೂವ್‌ಮೆಂಟ್ ಕೊಟ್ಟು ಅವರ ಗಂಟಲಿಂದಲೇ ಈ ಗಂಡು ಆರ್ಭಟ ಹೊರಹೊರಟಿತು ಎನ್ನುವ ವಾತಾವರಣ ಕಲ್ಪಿಸಿದರು.

"ಅದೀಗ ಸಾಧ್ಯವಿಲ್ಲ— ಹಸಿದ ಹೊಟ್ಟೆಯಲ್ಲಿ ನಾನು ಮಾತಾಡಲಾರೆ, ತತಕ್ಷಣವೇ ಬಡಿಸಿಬಿಡಿ ಆ ಮೇಲೆ ಏನಿದ್ದರೂ ಮಾತು. ವೃಥಾ ಕಾಲಹರಣದ ಮಾತಿನಿಂದೇನು ಪ್ರಯೋಜನ— ಎಲ್ಲಿ ಒಂದು ಟವಲು ಅಪ್ಪಣೆಯಾಗಬೇಕು" ಎಂದು ಕಣ್ಣುಮುಚ್ಚಿಯೇ ಹೇಳಿದ.

—ಬೆನ್ನು ಹತ್ತಿದ ಬೇತಾಳವೆಂದು ಲಲಿತಮ್ಮ ಒಳಕ್ಕೆ ನಿಷ್ಕ್ರಮಿಸಿದರು. ಚಿಂತಾಮಣಿರಾಯರು ಸಿಡಿಸಿಡಿಯ ಮುಖದಿಂದಲೇ ಹೆಗಲಮೇಲಿದ್ದ ಟವಲನ್ನು ಜೀವಣ್ಣನ ಮೇಲೆಸೆದರು.

—ಮತ್ತೊಂದು ತಪ್ಪಲೆಗೆ ಅರ್ಧಸೇರು ಅಕ್ಕಿ ಸುರುವಿ ಎಸರಿಗಿಟ್ಟರು ಲಲಿತಮ್ಮ. ಅವರಿಗೆ ಗೊತ್ತು ಅಳಿಯದೇವರ ಜೀರ್ಣಶಕ್ತಿಯ ಪ್ರಾಬಲ್ಯ. ಎಸರಿಟ್ಟು ಹೊರಕ್ಕೆ ಬಂದರು. ಬಡಿಸಲು ಅಡ್ಡಸೆರಗುಕಟ್ಟಿ ನಿಂತಿದ್ದು ಜೀವಣ್ಣನ ಹೆಂಡತಿ ಕಾಮಾಕ್ಷಿ.

"ಸಾಕು .. " ಎಂದದ್ದು ಮೂರನೆಬಾರಿ ಅನ್ನ ಬಡಿಸಿದಾಗ.

"ಬೇಕು" ಅಂದದ್ದು ತುಪ್ಪದ ಮಿಳ್ಳೆ ಖಾಲಿಯಾದಾಗ.

ಕದ್ದಕಣ್ಣಲ್ಲಿ—ಬಳೆಸದ್ದು ರಣಕ್ ಎಂದಾಗ ನೋಡಿದ. ಅದೇ ಕಾಮಾಕ್ಷಿ ತನಗೆ ಆದರ್ಶ ಮಡದಿ, ಇರಲಿಕ್ಕೆ ನೆಲೆದೊರೆಯುವಂತೆ ಮಾಡಿದ ದೇವತೆ. ಕಾಮಾಕ್ಷಿಯ ಮುಖದಲ್ಲಿ ಮಂದಹಾಸ ಮಿನುಗುತ್ತಿತ್ತು. ತನ್ನ ಯಜಮಾನರು ಮತ್ತೆ ಬಂದರಲ್ಲಾ ಎಂಬ ಹಿಗ್ಗುನಗುವನ್ನು ಕಿವಿಯಿಂದ ಕಿವಿತನ ಹಿಗ್ಗಿಸಿದ್ದಳು. ಅರ್ಧಪೂರ್ಣವಾಗಿ ಮಜ್ಜಿಗೆ ಅನ್ನ ತಿಂದು, ಅದೇತಾಟಗೆ ಅರ್ಧಸೇರು ಮಜ್ಜಿಗೆ ಹೊಯಿಸಿಕೊಂಡು ಕಂಠಪೂರ್ತಿ ತೇಗಿದ. ಆಮೇಲೆ ಕಾಮಾಕ್ಷಿಯನ್ನ ಕೇಳಿದ "ನಿನ್ನ ಊಟವಾಯಿತೇ—ಅನ್ನ ಮಿಕ್ಕಿದೆಯೇ" ಎಂದು. ನಸುನಾಚಿ ಕೋಗಿಲೆಯ ಕಂಠದಲ್ಲಿ

ಹೇಳಿದಳು "ಅಮ್ಮ ಇನ್ನೊಂದು ತಪ್ಪಲೆಯಲ್ಲಿ ಅನ್ನ ಕ್ಕಿಟ್ಟಿದ್ದಾಳೆ" ಎಂದು. ಕೈ ತೊಳೆದು, ಕಳ್ಳತನದಲ್ಲಿ ಕಾಮಾಕ್ಷಿಯ ಕೆನ್ನೆ ಚಿವುಟಿ, ಹೊರಕ್ಕೆ ಬಂದ.

—ಇತ್ತ ಹೊರಗಡೆಯಲ್ಲಿ ಚಿಂತಾಮಣಿ ರುಕ್ಕು, ಲಲಿತಮ್ಮ ಮತ್ತೆ ಹೈಸ್ಕೂಲು ಓದುತ್ತಿದ್ದ ಹೈದ ನಾರಾಯಣ, ಈ ಅಳಿಯ ದೇವರನ್ನು ತರಾಟೆಗೆ ತೆಗೆದುಕೊಳ್ಳಲು ರಂಗಸಜ್ಜಿಗೆ ತಯಾರಿಸಿ ಕಾದಿದ್ದರು.

"ಊಟವಾಯಿತೆ?"

"ಆದಹಾಗೆ ಆಯ್ತು ಮಾವಯ್ಯ"

"ಈಗ ಹೇಳಬಹುದಲ್ಲ"

"ಇನ್ನೂ ಎಲೆಅಡಿಕೆ ಬರಲಿಲ್ಲ ಹೊಟ್ಟೆಭಾರ"

"ನಾರಾಯಣ ಅದನ್ನೂ ತಂದುಕೊಡು" ಎನ್ನುವ ವೇಳೆಗೆ ವೀಳ್ಯದ ತಟ್ಟೆ ಯೊಡನೆ ಮದಗಜಗಮನೆಯಂತೆ ಕಾಮಾಕ್ಷಿ ಬಂದಳು. ಅವಳನ್ನು ನೋಡಿದ ಜೀವಣ್ಣ ಮುಗುಳುನಗೆ ಬೀರಿದ. ಮರುಕ್ಷಣವೇ ಮಾವನವರನ್ನು ನೋಡಿ ಸಿಡಿ ಮಿಡಿಯ ಮುಖಮಾಡಿ ಮಂಚದಮೇಲೆ ಕುಳಿತ. ಇಪ್ಪತ್ತು ಎಲೆ--ಪಾವು ಅಡಿಕೆ ಒಂದೂಕಾಲು ತೊಲ ಸುಣ್ಣ ತೀರುವವರೆಗೆ—ಮಾತೇ ಆಡಲಿಲ್ಲ. ಅಲ್ಲಿಯವರೆಗೆ ಕಾಯಬೇಕಾಯ್ತು ಮಾವ ಅತ್ತೆಯರು.

"ಬೀಸಣಿಗೆ" ಎಂದ. ಅದೂ ಬಂತು. ಮೆಲ್ಲಗೆ ಕಾಲುಚಾಚಿ ಹಾಸಿಗೆಗೆ ತಲೆಕೊಟ್ಟ. ನಿದ್ರೆ ತಾನೇತಾನಾಗಿ ಬಂತು—ಅರೆಕ್ಷಣದಲ್ಲಿ ಭೋರ್ಗರೆವ ಗೊರಕೆ ಕೇಳಬಹುದಿತ್ತು. ಜೋರಾಗಿ ಕೂಗುವುದೆಂದರೆ ಮಾವನದು ಕೀಚಲು ಗಂಟಲು- ಅತ್ತೆಗೆ ನಾಚಿಕೆ ಭಾವಮೈದನಿಗೆ ಅವನು ಕೇರುಮಾಡಲೊಲ್ಲ, ರುಕ್ಕು ಚಿಕ್ಕವಳು ಇನ್ನೂ ಉಳಿದವಳು ಕಾಮಾಕ್ಷಿ ಇನ್ನೂ ನಿಷೇಕವಿಲ್ಲ ಹೇಗೆ ಕರೆದಾಳು?

ಅಂತೂ ಇಂತೂ ಚಿಂತಾಮಣಿರಾಯರಿಗೆ ಚಿಂತೆ ತೊಲಗಲಿಲ್ಲ. ಮಲಗಿ ಏಳಲಿ ಆಮೇಲೆ ತರಾಟೆಗೆ ತೆಗೆದುಕೊಳ್ಳುವ ಎಂದು ಅವರೆಲ್ಲಾ ಊಟಕ್ಕೆ ಹೋದದ್ದನ್ನು ಜೀವಣ್ಣ ಅರೆಗಣ್ಣಲ್ಲಿ ಕದ್ದುನೋಡಿ, ತನ್ನ ಸಧ್ಯದ ಜಯಕ್ಕೆ ನಿಜವಾಗಲೂ ನಿದ್ರೆ ಬಂತು.

—ಎದ್ದಾಗ ಐದುಘಂಟೆಯಾಗಿತ್ತು. ಏಳುವುದನ್ನೇ ಕಾದಿದ್ದ ಮಾವನವರು

"ಈಗಲಾದರೂ ಇಲ್ಲಿಗೆ ಮತ್ತೆ ಬಂದಿದ್ದಕ್ಕೆ ಕಾರಣ ಹೇಳಬಾರದೆ?" ಎಂದು ಅಂಗಲಾಚಿದರು.

"ಇಲ್ನೋಡಿ ಮಾವ ನನ್ನ ಪೀಡಿಸಿ ಪ್ರಯೋಜನವಿಲ್ಲ, ಅಲ್ಲಿ ನಮ್ಮಪ್ಪ, ಜೋಡಿ ಮಂಚ, ಜೋಡಿಶಾಲು, ಜೋಡಿಸಂಸಾರದ ಪಾತ್ರೆಪಡ, ಜೋಡಿ ಬೆಳ್ಳಿದೀಪವಿಲ್ಲದೆ ಮನೆಗೆ ಕಾಲಿಡಬೇಡಾಂತಾನೆ. ಇಲ್ಲಿ ನೀವು ಇಲ್ಲಿಗೇಕೆ ಬಂದೆ ಅಂತ ನನ್ನ ಸತಾಯಿಸ್ತೀರ. ನನ್ನ ಹೆಂಡತಿ ಅದೇ 'ನಿಮ್ಮ ಮಗಳು ನೀವು ಇಲ್ಲೇ ಇರಿ. ನೀವಿಲ್ಲದಿದ್ದರೆ ನಾನು ಇರಲಾರೆ ಪ್ರಾಣಬಿಡ್ತೀನಿ ಪ್ರಿಯ' ಅಂತ ಕಾಗದ ಬರಿತಾಳೆ. ಆದ್ದರಿಂದ, ನೀವು ಅಷ್ಟೆಲ್ಲಾ ಅಪ್ಪನ ಬೇಡಿಕೆಯ ಉಡುಗೆರೆ ಕೊಡೋದಕ್ಕಿಂತ, ನಿಮ್ಮ ಮಗಳೊಡನೆ ಇಲ್ಲಿಯೇ ಇದೇ ರೂಮಲ್ಲಿ ನನ್ನ ಪಾಡಿಗೆ ನಾನಿದ್ದರೆ ನಿಮ್ಮ ಗಂಟೇನು ಹೋಗುತ್ತೆ ...ಅದೇ ನಿಮ್ಮ ಮಗಳ ಸೂಚನೆ ಅವಳೇ ಹೇಳಿದ್ದು ಹೀಗೆ ಮಾಡೀಂತ ನಂದೇನು ತಪ್ಪು?....ಕಾಫಿ ಕೊಡಿ" ಎಂದಾಗ ಚಿಂತಾಮಣಿ ಮೂರ್ಛೆಹೋದ. ಮಗಳು ನಸುನಕ್ಕಳು. ಅತ್ತೆ ಅದೇಸರಿ ಅನ್ನುವ ಮುಖ ಮಾಡಿದಳು.

ಎಲ್ಲರೂ ಎದ್ದು ಹೊರಟುಹೋದರು. ಚಿಂತಾಮಣಿರಾಯ ಯತ್ನವಿಲ್ಲದೆ ಮಗಳ ಕೈಲಿ ಕಾಫಿಲೋಟ ಕೊಟ್ಟು ಕಳಿಸಿದರು. ಕಾಮಾಕ್ಷಿ ನಸುನಗುತ್ತಾ ರೂಮಿಗೆ ಬಂದಾಗ ಜೀವಣ್ಣ ಹಿರಿ ಹಿರಿ ಹಿಗ್ಗಿದ — ಬರುವಾಗ ಬಾಗಿಲು ಮುಂದೆಮಾಡಿ ಬಂದಳು ಕಾಮಾಕ್ಷಿ.....

—ಇಂತು ಅನಂತಕಾಲ ಜೀವಣ್ಣ ಸುಖವಾಗಿ ಮಾವನ ಮನೆಯೊಳ್ ಇರ್ದನೆಂಬಲ್ಲಿಗೆ ಅಳಿಯಕಾಂಡ ಪರಿಸಮಾಪ್ತಿ.

—ದಾಶರಥಿ ದೀಕ್ಷಿತ್




ಏನ್ರೀ ಸ್ವಾಮಿ!

ಅಸೆಂಬ್ಲಿ ಮುಗಿದು ಮೂರುದಿನ ಆದರೂ, ನನ್ನ ಹಳೇ ಬಾಕಿ ಇನ್ನೂ ತೀರಿಸಲೇ ಇಲ್ಲವಲ್ಲಾ !



# ಬೆಕ್ಕುಗಳಿದ್ದರೆ

## ಶಾಂತಿಯು ನಿರ್ಮೂಲ

ಬೆಕ್ಕುಗಳನ್ನು ರೇಗಿಸಿದವನಿಗೆ ಈ ಜನ್ಮದಲ್ಲಿ ಶಾಂತಿ ಸಿಗದೆಂದೂ, ಸತ್ತು ಸಮಾಧಿಯಾಗುವಾಗ ಚಂಡಮಾರುತ ಮತ್ತು ಮಳೆಯಾಗುವುದೆಂದೂ ಜರ್ಮನಿಯಲ್ಲಿ ಒಂದು ನಂಬಿಕೆ ಇದೆ.

ಪ್ರತಿಯೊಬ್ಬ ಮಾನವನೂ ಶಾಂತಿಗಾಗಿ ಹಾತೊರೆಯುತ್ತಾನೆ ಮತ್ತು ಭವಿಷ್ಯವು ನಿಷ್ಕರ್ಷೆಯಾದಾಗ ಮಾನವನ ಆತ್ಮಶಕ್ತಿಯು ಬಲಯುತವಾಗುತ್ತದೆ.

ಬಾಂಬೆ ಮ್ಯೂಚುವಲ್‌ರವರಲ್ಲಿ ವಿಮೆ ಮಾಡುವುದರಿಂದ ನೀವು ಆರ್ಥಿಕ ಭದ್ರತೆಯನ್ನು ಹೊಂದುವಿರಿ.





**ಎಂಡೋವ್ಮೆಂಟ್ ಅಷ್ಯೂರೆನ್ಸ್**

ಹಣ ಶೇಖರಿಸಿಡಲು ಅತ್ಯುತ್ತಮ ಮಾರ್ಗ. ವಿಮಾದಾತನು ಅಲ್ಪಾಯುವಾದಲ್ಲಿ ಸಂಸಾರಕ್ಕೆ ರಕ್ಷಣೆ ಈಯುವುದು. ಹಿರಿಯ ವಯಸ್ಸಿನಲ್ಲಿ ಆತನಿಗೇ ಕೈನೆರವಾಗುತ್ತದೆ.

**ಸ್ಥಾಪನೆ:**
**1871**

ದಿ

**ಬಾಂಬೆ ಮ್ಯೂಚುವಲ್**
**ಲೈಫ್ ಅಷ್ಯೂರೆನ್ಸ್ ಸೊಸೈಟಿ ಲಿಮಿಟೆಡ್,**

ಬಾಂಬೆ ಮ್ಯೂಚುವಲ್ ಬಿಲ್ಡಿಂಗ್,
ದಾದಾಬಾಯ್ ನೌರೋಜಿ ರೋಡ್, ಬೊಂಬಾಯಿ 1.

**ಬೆಂಗಳೂರು ಬ್ರಾಂಚ್ ಕಛೇರಿ:— 172/3, ನರಸಿಂಹರಾಜಾ ರಸ್ತೆ, ಬೆಂಗಳೂರು 2.**

**EVERY POLICYHOLDER A SHAREHOLDER**

HAS 150

**ಶೀಘ್ರದಲ್ಲಿಯೇ ಪ್ರದರ್ಶನಾರಂಭ!**

ಪರಿಮಳಂರವರ—

# ಸ್ವರ್ಗ ವಾಸಲ್

[ತಮಿಳು]






ಅಂಜಲಿ — ಕೆ. ಆರ್. ರಾಮಸ್ವಾಮಿ — ಪದ್ಮಿನಿ

ರಾಜೇಂದ್ರನ್ — ಆರ್. ಬಾಲಸುಬ್ರಮಣ್ಯಂ.

ಕತೆ ಮತ್ತು ಸಂಭಾಷಣೆ:— ಅಣ್ಣಾ ದೊರೆ



ನಿರೀಕ್ಷಿಸಿ:— ಪ್ರಜಾ ರಾಜ್ಯಂ [ತೆಲುಗು]

CONTACT:

RAGHAVENDRA PICTURES

GANDHINAGAR, BANGALORE 2

**7-5-54 ರಿಂದ ಅಮೋಘ ಪ್ರಾರಂಭ!**



ಬೆಂಗಳೂರು ಸಾಗರ್ ★ ಶಿವಾಜಿ

ಗುಬ್ಬಿ ಕರ್ನಾಟಕ ರವರ

# ಬೇಡರ ಕಣ್ಣಪ್ಪ

(ಕನ್ನಡ) ನಿರ್ದೇಶನ. ಹೆಚ್. ಎಲ್. ಎನ್. ಸಿಂಹ



ಸ್ಟುಡಿಯೋ:
ಎ.ವಿ.ಯಂ



ಮೈಸೂರು: ನ್ಯೂ ಆಪೇರಾ, ದಾವಣಗೆರೆ: ಮೋತಿ, ಮಂಗಳೂರು: ಜ್ಯೋತಿ, ಶಿವಮೊಗ್ಗ: ವಿನಾಯಕ, ಹಾಸನ: ಇಂಪೀರಿಯಲ್, ಚಿತ್ರದುರ್ಗ: ಶಂಕರ, ಚಿಕ್ಕಮಗಳೂರು: ಗುರುನಾಥ, ತಿಪಟೂರು: ವಿನೋದ, ಬಳ್ಳಾರಿ: ರಾಯಲ್ ಪಿಕ್ಚರ್ ಪ್ಯಾಲೇಸ್, ಹೊಸ್ಪೇಟೆ: ವಿಜಯ, ರಾಯಚೂರು: ಹನುಮಾನ್, ಗುಲ್ಬರ್ಗ: ನ್ಯೂ ಮದನ್, ಹುಬ್ಬಳ್ಳಿ: ಸುದರ್ಶನ, ಧಾರವಾಡ: ವಿಜಯ ಟಾಕೀಸ್, ಬಾಗಲ್‌ಕೋಟೆ: ಶಕ್ತಿ, ಬೆಳ್ಗಾವ್: ಚಿತ್ರ, ಬಿಜಾಪುರ: ತ್ರಿಪುರಸುಂದರಿ, ಸಿರಸಿ: ಸಾಗರ್ ಚಿತ್ರಮಂದಿರ.

Printed by B. S Iyengar, Bangalore City
Publisher—B N Gupta. Editor—M Sivaram